ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೩ ಮೇ ೨೦೧೭ ಸಂಚಿಕೆ : ೦೫



ಏಪ್ರಿಲ್ ೧ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರ ೧೧೦ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಕಾರ್ಯಕ್ರಮವನ್ನು ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ವಾಜುಭಾಯಿ ಆರ್. ವಾಲಾ ಅವರು ವಿದ್ಯುತ್ ಗುಂಡಿ ಒತ್ತುವುದರ ಮೂಲಕ ೧೧೦ ಜ್ಯೋತಿಗಳನ್ನು ಬೆಳಗಿಸಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು, ಶ್ರೀ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಡಾ. ಸಿ. ಸೋಮಶೇಖರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ಪಾದಪೂಜೆ ಮಾಡುವುದರ ಮೂಲಕ ಗುರುವಂದನೆ ಸಲ್ಲಿಸಲಾಯಿತು.




ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಆಶೀರ್ವಚನ





ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಪತ್ರಿಕಾ ನಿರ್ವಹಣಾ ಸಮಿತಿ :
**ಎಂ. ರೇಣುಕಾರಾಧ್ಯ**
**ಆರ್.ಎಸ್. ಮಲ್ಲೇಶಪ್ಪ**
**ಕೆ.ಬಿ. ಶಿವಶಂಕರಯ್ಯ**
**ಸಿ. ಕುಮಾರಸ್ವಾಮಿ**

ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.

ಮುದ್ರಕರು :
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು–572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104
ದೂ: 0816–2282322.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೫೩ ಮೇ ೨೦೧೭ ಸಂಚಿಕೆ : ೦೫**

## ಒಳಪುಟಗಳಲ್ಲಿ .................




**ಚಂದಾ ವಿವರ : ವಾರ್ಷಿಕ ಚಂದಾ ರೂ. 200/-**
**ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00**

# ಗುರುವಂದನ ಸಮಾರಂಭ

**ಪರಮಪೂಜ್ಯ** ಶ್ರೀಶ್ರೀಗಳವರು ಏಪ್ರಿಲ್ ಒಂದರಂದು ೧೧೦ನೆಯ ವರ್ಷಕ್ಕೆ ಪಾದಾರ್ಪಣೆ ಮಾಡಿದ್ದು ಭಕ್ತ ಜಗತ್ತಿಗೆ ಕೈಲಾಸ ದರ್ಶನವನ್ನೇ ಮಾಡಿಸಿತು. ರಾಜ್ಯದ ಘನತೆವೆತ್ತ ರಾಜ್ಯಪಾಲರಾದ ಶ್ರೀ ವಜುಭಾಯಿ ಆರ್. ವಾಲಾ ಅವರು ಅಂದು ಕಿಕ್ಕಿರಿದು ನೆರೆದಿದ್ದ ಜನಸ್ತೋಮದ ಸಭೆಯನ್ನು ಉದ್ಘಾಟಿಸುತ್ತಾ ಪರಮಪೂಜ್ಯರಿಗೆ **'ಭಾರತರತ್ನ'** ಪ್ರಶಸ್ತಿ ಬರಬೇಕೆಂದು ನುಡಿದರು. ಸುತ್ತೂರು ಶಿವರಾತ್ರೀಶ್ವರ ಮಠದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಸಿದ್ಧಗಂಗಾ ಶ್ರೀಗಳವರ ಮಾರ್ಗದರ್ಶನ ಇನ್ನೂ ಬಹುಕಾಲ ನಾಡಿಗೆ, ಜನತೆಗೆ ಲಭಿಸಬೇಕು ಎಂದು ನುಡಿದರು. ವಿಜಯಪುರದ ಜ್ಞಾನಯೋಗಾಶ್ರಮದ ಪರಮಪೂಜ್ಯರಾದ ಶ್ರೀ ಶ್ರೀ ಸಿದ್ಧೇಶ್ವರಮಹಾಸ್ವಾಮಿಗಳು ಭಕ್ತಿನುಡಿ ಸಮರ್ಪಣ ಮಾಡಿದರು. ಸಮಾರಂಭದಲ್ಲಿ ಶ್ರೀ ಸಿದ್ಧಗಂಗಾ ಶ್ರೀಗಳವರು ವಿವಿಧ ಸಂದರ್ಭಗಳಲ್ಲಿ ವಿವಿಧ ಸಂಸ್ಥೆ, ಸಮಾರಂಭಗಳಿಗೆ ಬರೆದ ಸಂದೇಶಗಳ ಬೃಹತ್ ಗ್ರಂಥ **'ಸಂದೇಶ ಸಿರಿ'** ಯನ್ನು ಬಿಡುಗಡೆ ಮಾಡಲಾಯಿತು. ಶ್ರೀಮಠದ ಭಕ್ತರಾದ ಲಕ್ಷ್ಮೀಪುರದ ಶ್ರೀ ಬಸವರಾಜು ಹಾಗೂ ಶ್ರೀ ರಾಮಾಂಜಿನಪ್ಪನವರು **'ಸಂದೇಶ ಸಿರಿ'** ಗ್ರಂಥದ ದಾಸೋಹ ಕೈಂಕರ್ಯವನ್ನು ತಮ್ಮದಾಗಿಸಿಕೊಂಡರು. **'ಸಿದ್ಧಗಂಗಾ'** ಶ್ರೀಯುತರುಗಳಿಗೆ ಕೃತಜ್ಞತೆಗಳನ್ನು ಅರ್ಪಿಸಲು ಸಂತೋಷಿಸುತ್ತದೆ. ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ಶ್ರೀ ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ಜಿ. ನಾಗಸುಂದರ್ ಅವರಿಗೆ, ಸಂಪಾದನಾ ಸೇವೆಯಲ್ಲಿ ಶ್ರಮ ವಹಿಸಿದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರಿಗೆ ಶರಣಾರ್ಥಿಗಳು.

ನಾಡಿನುದ್ದಗಲದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ಜನ್ಮದಿನೋತ್ಸವ ಗುರುವಂದನಾ ಸಮಾರಂಭಗಳನ್ನು ಆಚರಿಸಿದ ಭಕ್ತಾದಿಗಳಿಗೆ, ಹಳೆಯ ವಿದ್ಯಾರ್ಥಿಗಳಿಗೆ, ಅಭಿಮಾನಿಗಳಿಗೆ, ಸಂಸ್ಥೆಗಳಿಗೆ **'ಸಿದ್ಧಗಂಗಾ'** ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸಲು ಸಂತೋಷಿಸುತ್ತದೆ.

ಕರ್ನಾಟಕ ಸರ್ಕಾರ ಭಗವಾನ್ ಮಹಾವೀರ ಶಾಂತಿ ಪ್ರಶಸ್ತಿಯನ್ನು ಪ್ರಪ್ರಥಮವಾಗಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ನೀಡಿದುದಕ್ಕಾಗಿ **'ಸಿದ್ಧಗಂಗಾ'** ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತದೆ. ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರು ದಿನಾಂಕ ೧೭-೦೪-೨೦೧೭ ರಂದು ಸದರಿ ಪ್ರಶಸ್ತಿಯನ್ನು ನೀಡಿದರು. ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆಯರಾದ ಶ್ರೀಮತಿ ಉಮಾಶ್ರೀ ಉಪಸ್ಥಿತರಿದ್ದರು.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು







# ಶರಣ ಕ್ಷೇತ್ರಗಳು

ಬಸವಕಲ್ಯಾಣ ಇಡೀ ಮನುಕುಲದ ಹೃದಯವೆಂಬ ಅರಿವು ಸನ್ನಿಹಿತವಾಗುತ್ತಿದೆ. ಶರಣ ಕ್ಷೇತ್ರಗಳು ಸಮಾಜದ ಅತ್ಯಮೂಲ್ಯ ಪವಿತ್ರ ಶ್ರದ್ಧಾಕೇಂದ್ರಗಳು. ಮಾನವೀಯತೆಯನ್ನು ಜಗತ್ತಿಗೆ ಬಿತ್ತಿದ ಮಂಗಳಧಾಮಗಳು. ಜಾಗೃತಸ್ಥಾನಗಳು, ಶತಶತಮಾನಗಳು ಕಳೆದರೂ ಸ್ಫೂರ್ತಿ ನೀಡುವ ಜೀವದಾಯಿಗಳು. ಬೆಳಕಿನ ಚೇತನಗಳೆನಿಸಿದ ಬಸವಾದಿ ಪ್ರಮಥರು ಬಿಟ್ಟುಹೋಗಿರುವ ದೀಪದ ಹೆಜ್ಜೆಗಳು. ಅವುಗಳ ಸ್ಮರಣೆಯೆಂದರೆ ಸಂಸ್ಕೃತಿಯ ರಕ್ಷಣೆಯದೇ ಅರ್ಥ. ಅರಿವಿನಮನೆ ಎಂಬುದು ಅನುಭಾವದಂಗಳದಲ್ಲಿ ಅರಳಿದ ಪವಿತ್ರ ಬೆಳಕು. ಮನುಕುಲದ ಅನಂತ ಕಾಲದ ಚಿಂತನೆಯ ಶಿವಬೆಳಕು. ಅಲ್ಲಿ ನಡೆದ ಚಿಂತನ–ಮಂಥನಗಳು ಅರ್ಚನ, ಅರ್ಪಣ, ಅನುಭಾವ ಶರಣಸಿದ್ಧಾಂತದ ತ್ರಿಪುಟಿಗಳು. ಸಮಾಜ ಬಾಂಧವರು ಚಾರಿತ್ರ್ಯಕ್ಕೆ ಗಮನ ನೀಡಿದಂತೆ ಚರಿತ್ರೆಗೂ ಗಮನ ನೀಡಬೇಕು. ಬಸವಣ್ಣನವರು ಹೇಳುವಂತೆ 'ಅನ್ನದೊಳಗೊಂದಗುಳ, ಸೀರೆಗೊಂದೆಳೆಯ, ಇಂದಿಂಗೆ ನಾಳಿಂಗೆ ಕೊಂಡೆನಾದಡೆ ತಲೆದಂಡ ತಲೆದಂಡ' ಎಂಬ ಅಸಂಗ್ರಹ ಭಾವನೆ ಎಲ್ಲ ಕಾಲಕ್ಕೂ ಬೇಕಾದುದು.

ಶರಣ ಆಯ್ದಕ್ಕಿ ಮಾರಯ್ಯನವರ ಧರ್ಮಪತ್ನಿ ಆಯ್ದಕ್ಕಿ ಲಕ್ಕಮ್ಮನ 'ಈಸಕ್ಕಿ ನಿಮಗ್ಯಾಕೆ' ಎಂಬ ನುಡಿಯ ಹಿಂದಿರುವ ಅಸಂಗ್ರಹ ಭಾವನೆ ಸ್ವಾಗತನೀಯ. ಅನ್ನ, ಅರಿವೆ, ಅಂದಣಗಳಿಗಿಂತ ಮನುಷ್ಯನಿಗೆ 'ಅರಿವು' ಮುಖ್ಯವಾದುದು. ಅದುವೇ ಗುರುವಾಗಬೇಕು. ಗುರುವಾದವನು 'ಇಹ'ದ ಸಿರಿಗಿಂತ 'ಆತ್ಮ'ನ ಸಿರಿಯನ್ನು ತನ್ನದಾಗಿಸಿಕೊಳ್ಳುವ ಅರಿವುಳ್ಳವನಾಗಬೇಕು. ಕಲ್ಯಾಣ ಬಿತ್ತಿದ್ದು ಮುಖ್ಯವಾಗಿ ಅರಿವನ್ನು, ಅದಕ್ಕೇ ಅವರೆಂದುದು 'ಅರಿತರೆ ಶರಣ'ನೆಂದು. ಏನನ್ನು ಗಳಿಸಬೇಕು, ಹೇಗೆ ಗಳಿಸಬೇಕು? ಎಷ್ಟು ಗಳಿಸಬೇಕು? ಎಂಬ 'ಅರಿವು' ಬೇಕು ಶರಣನಿಗೆ. ಕಲ್ಯಾಣದಲ್ಲಿ ಅರಳಿದ ಶರಣ ಶರಣೆಯರೆಲ್ಲ ಈ ತತ್ತ್ವವನ್ನು ಅರಿತು ಬಾಳಿದರು. ಶರಣ ಕ್ಷೇತ್ರಗಳು ಅರಿವಿನ ಸಿರಿಯನ್ನು ಬಿತ್ತಿ ಬೆಳೆಯುವ ಪುಣ್ಯಕ್ಷೇತ್ರಗಳು.

* * *

ಸ್ಥಾನ–ಮಾನಗಳು ಒಂದೇ ನಾಣ್ಯದ ಎರಡು ಮುಖಗಳು. ಅವುಗಳಲ್ಲಿ ಯಾವುದೊಂದು ಮುಕ್ಕಾದರೂ, ಮುರಿದು ಬಿದ್ದರೂ, ಸವೆದು ಹೋದರೂ, ಮಾಸಿದರೂ ಗೌರವಕ್ಕೆ ಚ್ಯುತಿಬರುತ್ತದೆ. ಸಾರ್ವಜನಿಕ ಜೀವನದಲ್ಲಿರುವಾಗಲಂತೂ ಎಷ್ಟು ಎಚ್ಚರವಾಗಿದ್ದರೂ ಸಾಲದು. ಸಂಯಮ ಮಾತು ಕೃತಿಗಳಲ್ಲಿ ನಿಹಿತವಾಗಿದಷ್ಟೂ ಒಳ್ಳೆಯದು. ಸ್ವಾಮಿಗಳು, ಸಚಿವರು, ಶಾಸಕರು, ಅಧಿಕಾರಿಗಳು, ಗೃಹಸ್ಥರು – ಯಾರೇ ಆಗಿರಲಿ ಸ್ಥಾನಕ್ಕೆ ತಕ್ಕುದಾದ ಮಾನವನ್ನು ಕಾಪಾಡಿಕೊಂಡಿರಬೇಕು.

## ಶ್ರೀ ಸಿದ್ಧಲಿಂಗೇಶ್ವರ ವಚನ



***ಕಸನೀರು ತರುವ ದಾಸಿಗೆ ಒಂದು ಶಿಶು ಹುಟ್ಟಿತ್ತು ನೋಡಾ ಶಿಶುವೆದ್ದು ತಾಯನಪ್ಪಲು ಕಸನೀರರತು ಹೋಯಿತ್ತು ಕಾರಣ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ***

ಕಸನೀರು ತರುವ ದಾಸಿಗೆ – ಕಸ – ಮರಣರೂಪವೆ ಆದ ಅಜ್ಞಾನವೆಂಬ ಅಶಿ ಕಸವು, ನೀರು– ಸಂಸಾರ ವಿಷಯ ಜಲವನು, ತರುವ – ಆಗು ಮಾಡಿಕೊಂಡು ಬರುವ, ದಾಸಿಗೆ – ಮಾಯಾಶಕ್ತಿಯೆಂಬ ಗೌಡಿಗೆ, ಬಂದು ಶಿಶು – ಬಂದು ಜೀವನವೆಂಬ ಅರ್ಭಕನು, ಹುಟ್ಟಿತ್ತು – ಉತ್ಪತ್ಯವಾಯಿತ್ತು, ನೋಡಾ – ಕಂಡಾ, ಶಿಶುವೆದ್ದು ತಾಯನಪ್ಪಲು, ಶಿಶು – ಜೀವನವೆಂಬ ಅರ್ಭಕನು, ಎದ್ದು – ಹೆಜ್ಜೆ, ತಾಯ – ಶ್ರೀ ಗುರುನಾಥನೆಂಬ ಜನನಿಯನು, ಅಪ್ಪಲು – ತಕ್ಕೈಸಲು, ಕಸ – ಮರಣರೂಪವಾದ ಅಜ್ಞಾನವೆಂಬ ಕಸವು, ನೀರು – ಸಂಸಾರ ವಿಷಯ ಜಲವು, ಅರತು ಹೋಯಿತ್ತು, ಕಾಣಾ – ಕಂಡಾ, ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ|| ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಗುರುಭಕ್ತಿಯೆ ಬ್ರಹ್ಮವು ಗುರುಭಕ್ತಿಯೆ ಜ್ಞಾನವು
ಬ್ರಹ್ಮಜ್ಞಾನವೆ ಗುರುಭಕ್ತಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಮನ ಬಂದಂತೆ ನಡೆಸಿಕೋ ಎಂಬೆನು
ಇನ್ನು ಎದುರಾಡೆನು ನನ್ನಾಣೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಪ ತಪ ಧ್ಯಾನ ಮೌನವ್ರತ ಪೂಜೆಗಳಿಗೆಲ್ಲ
ನಿಲುಕುವ ನೀನಲ್ಲ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನವೆಂಬ ಮಂಟಪದ ನೆಳಲಲ್ಲಿ ಬೆಳಗುತಿಹ
ಘನಗುರುವೆ ಶಿವಚೆಲುವೆ ಪೊಡಮಡುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಹವನೊಡಗೂಡಿದ ತನುವು ನಿನದಾಗಿರಲು
ಮನವು ಕಾರುಣ್ಯದ ಕಲ್ಯಾಣಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ನಾಮವೆ ಮಧುರ ನಿನ್ನ ರೂಪವೆ ಚೆಲುವು
ಸಾವಿಲ್ಲದ ಕೇಡಿಲ್ಲದ ಶಿವಚೆಲುವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಾಂಗ ಲಿಂಗಾಂಗವಾಗಿರುವ ಶಿವಚೆಲುವೆ
ಸರ್ವವನೊಳಕೊಂಡ ನಗೆರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರಸ್ಥಲದಿ ಕುರುಹಿಡಿದು ಉರಸ್ಥಲದಿ ಅರಿವಿಡಿದು
ಸ್ವಯಸ್ಥಳದಿ ಅನುಭಾವ ತಾನಿಡಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೆಳಗಿನೊಳಗಣ ಬೆಳಗು ಮಹಬೆಳಕು ನೀನಾದೆ
ಥಳಥಳಸಿ ಹೊಳೆದು ಬೆಳಗಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದಗಳು ನಿನ್ನೊಳಗೆ ಆಗಮವು ನಿನ್ನೊಳಗೆ
ಶಾಸ್ತ್ರ ಪುರಾಣಗಳು ನಿನ್ನೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಲಕ್ಷಾಂತರ ಭಕ್ತರ ಸಮ್ಮುಖದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ೧೧೦ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಸಮಾರಂಭ

ವರದಿ : ಎಚ್.ಎಸ್. ಸಿದ್ಧಗಂಗಪ್ಪ *

**ಸು**ಮಾರು ಒಂದು ಸಾವಿರ ವರ್ಷ ಇತಿಹಾಸ, ಭವ್ಯ ಪರಂಪರೆಯುಳ್ಳ ಶ್ರೀ ಸಿದ್ಧಗಂಗಾ ಕ್ಷೇತ್ರದ ಗುರು ಪರಂಪರೆಯಲ್ಲಿ ಬಂದ ತ್ರಿವಿಧ ದಾಸೋಹಿ, ಕಾಯಕ ಯೋಗಿ, ಮಹಾಮಾನವತಾವಾದಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕಳೆದ ೮೭ ವರ್ಷಗಳಿಂದ ಸಕಲ ಜೀವಿಗಳಿಗೂ ಲೇಸನ್ನೇ ಬಯಸುತ್ತಾ, ಲೋಕಕಲ್ಯಾಣಕ್ಕಾಗಿ ತಮ್ಮನ್ನು ಸಮರ್ಪಿಸಿಕೊಳ್ಳುವುದರ ಮೂಲಕ ಶ್ರೀಮಠದ ಕೀರ್ತಿಯನ್ನು ವಿಶ್ವಮಟ್ಟಕ್ಕೆ ಕೊಂಡೊಯ್ದಿದ್ದಾರೆ. ತ್ರಿಕಾಲ ಶಿವಯೋಗಾನುಷ್ಠಾನ ಮಾಡುವುದರ ಮೂಲಕ ತಮ್ಮ ತಪಶಕ್ತಿಯ ಫಲವನ್ನು ಲೋಕಕಲ್ಯಾಣಕ್ಕಾಗಿ ಧಾರೆಯುರೆಯುತ್ತಾ ಬಂದಿದ್ದಾರೆ. ಲಕ್ಷಾಂತರ ಜನರಿಗೆ ಅನ್ನ, ವಿದ್ಯೆಯನ್ನು ನೀಡಿ, ಅವರೆಲ್ಲರ ಭವಿಷ್ಯವನ್ನು ಉಜ್ವಲವಾಗುವಂತೆ ಮಾಡಿದ್ದಾರೆ. ಲಕ್ಷಾಂತರ ಮನೆಗಳಲ್ಲಿ ಸಿದ್ಧಗಂಗಾ ಜ್ಯೋತಿ ಪ್ರಜ್ವಲಿಸುವಂತೆ ಮಾಡಿದ್ದಾರೆ. ಕೋಟ್ಯಾಂತರ ಭಕ್ತರ ಆಶಾಜ್ಯೋತಿಯಾಗಿ, ನಡೆದಾಡುವ ದೇವರೆಂದೇ ಜನಮಾನಸದಲ್ಲಿ ಪೂಜ್ಯ ಸ್ಥಾನವನ್ನು ಪಡೆದಿರುವ ಪೂಜ್ಯ ಶ್ರೀಗಳವರು ಇರುವ ಕಾಲದಲ್ಲಿ ನಾವಿದ್ದೇವೆಂಬುದೇ ನಮ್ಮೆಲ್ಲರ ಪುಣ್ಯ ವಿಶೇಷ.

ಏಪ್ರಿಲ್ ೧, ೨೦೧೭ ರಂದು ಶ್ರೀಮಠದಲ್ಲಿ ಸಂಭ್ರಮದಿಂದ ಕೂಡಿದ ಹಬ್ಬದ ವಾತಾವರಣ. ಪೂಜ್ಯ ಶ್ರೀಗಳವರು ೧೦೯ ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ೧೧೦ರ ಶಿವ ಹೆಜ್ಜೆಗಳನ್ನಿಡುತ್ತಿರುವ ಶುಭಸಂದರ್ಭ. ಭಕ್ತರ ಪಾಲಿಗೆ ವಿಶೇಷವಾದ ಪುಣ್ಯದಿನ. ಏಪ್ರಿಲ್ ೧ ಬಂತೆಂದರೆ ಲಕ್ಷಾಂತರ ಜನ ಭಕ್ತರು, ಅಭಿಮಾನಿಗಳು, ಹಳೆ ವಿದ್ಯಾರ್ಥಿಗಳ ಪಾಲಿಗೆ ಮರೆಯಲಾಗದ ಅವಿಸ್ಮರಣೀಯ ಶುಭದಿನ. ಪರಮಪೂಜ್ಯರ ದರ್ಶನ ಮಾಡಿ ಧನ್ಯತೆಯನ್ನು ಪಡೆಯಲು ನಾಡಿನ ಮೂಲೆ ಮೂಲೆಗಳಿಂದ ಹಾಗೂ ಆಂಧ್ರ, ತಮಿಳುನಾಡಿನಿಂದ ಭಕ್ತರು ಆಗಮಿಸಿ ಹಬ್ಬದಲ್ಲಿ ಭಾಗಿಯಾದರು. ಪರಮಪೂಜ್ಯರನ್ನು ದರ್ಶನ ಮಾಡಿ ಕಣ್ಮನಗಳಲ್ಲಿ ತುಂಬಿಕೊಂಡು ಸಾರ್ಥಕತೆಯನ್ನು ಪಡೆದರು. ಕ್ಯಾತಸಂದ್ರದಿಂದ ಶ್ರೀಮಠದವರೆಗೂ ತಳಿರು ತೋರಣಗಳ ಸಿಂಗಾರ. ಭಕ್ತರು, ಅಭಿಮಾನಿಗಳಿಂದ ಶುಭಕೋರುವ ಫ್ಲೇಕ್ಸ್‌ಗಳು ಎಲ್ಲಾ ಕಡೆಯೂ ರಾರಾಜಿಸುತ್ತಿದ್ದವು. ಎಲ್ಲಿ ನೋಡಿದರೂ ಭಕ್ತ ಸಾಗರ, ಸಡಗರ ಸಂಭ್ರಮದ ಮಹಾಪೂರ.

ಪೂಜ್ಯ ಶ್ರೀಗಳವರು ದರ್ಶನ ಮಾಡಿದಾಗ ಪರಶಿವನ ದರ್ಶನ ಮಾಡಿದಷ್ಟೇ ಪುಣ್ಯ ಎಂದು ಭಾವಿಸಿದರು. ನಾಡಿನ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಆಗಮಿಸಿ ಪೂಜ್ಯರ ಶಿವಯೋಗಾನುಷ್ಠಾನ ಮಂಗಳ ಮುಹೂರ್ತದಲ್ಲಿ ಭಾಗಿಯಾಗಿ ಇಷ್ಟಲಿಂಗ ಪೂಜೆಯನ್ನು ಮಾಡಿದುದು ಕಣ್ಮನಗಳನ್ನು ತುಂಬಿಸಿಕೊಳ್ಳುವ ಒಂದು ಅಪೂರ್ವ ದೃಶ್ಯ.

ತ್ರಿವಿಧ ದಾಸೋಹಿ, ವಿಶ್ವಸಂತ, ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕರಕಮಲ ಸಂಜಾತರು, ಶ್ರೀಮಠದ ಅಧ್ಯಕ್ಷರೂ ಆದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀ ಶ್ರೀಗಳವರ ಪಾದಪೂಜೆ ಮಾಡುವುದರ ಮೂಲಕ ಗುರುವಂದನೆ ಸಮರ್ಪಿಸಿದರು. ಈ ಅಮೃತ ಘಳಿಗೆಯಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಸಾಕ್ಷಿಯಾದರು.



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ಪಾದಪೂಜೆ ಮಾಡುವುದರ ಮೂಲಕ ಗುರುವಂದನೆ ಸಲ್ಲಿಸಲಾಯಿತು.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು–೯೧


ಹಳೆಮಠದಿಂದ ಪೂಜ್ಯ ಶ್ರೀ ಶ್ರೀಗಳವರು ದಯಮಾಡಿಸುತ್ತಿರುವುದು.

ಗುರುವಂದನೆ ಸಲ್ಲಿಸುವ ಶುಭ ಸಂದರ್ಭದಲ್ಲಿ ಕನಕಪುರ ಶ್ರೀದೇಗುಲ ಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಶ್ರೀ ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು, ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು, ಚಿಕ್ಕತೊಟ್ಲುಕೆರೆಯ ಪೂಜ್ಯ ಶ್ರೀ ಅಟವೀ ಶ್ರೀಗಳು, ಬೆಟ್ಟಹಳ್ಳಿ ಮಠದ ಪೂಜ್ಯ ಶ್ರೀ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಹೊನ್ನಮ್ಮಗವಿ ಮಠದ ಪೂಜ್ಯ ಶ್ರೀ ಶ್ರೀ ರುದ್ರಮುನಿ ಶಿವಾಚಾರ್ಯ ಸ್ವಾಮಿಗಳು, ಹರಳೂರು ಜಂಗಮಮಠದ ಪೂಜ್ಯ ಶ್ರೀ ಶ್ರೀ ಚೆನ್ನಬಸವ ಸ್ವಾಮಿಗಳು, ಕಂಬಾಳುಮಠದ ಪೂಜ್ಯ ಶ್ರೀ ಶ್ರೀ ಚೆನ್ನವೀರ ಶಿವಾಚಾರ್ಯ ಸ್ವಾಮಿಗಳು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಭಾಗವಹಿಸಿದ್ದರು.

ಪೂಜ್ಯರ ಹುಟ್ಟು ಹಬ್ಬದ ಅಂಗವಾಗಿ ಶ್ರೀಮಠದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ, ಸಿದ್ಧಗಂಗಾ ಮಾತೆ ದೇವಾಲಯ, ಶ್ರೀ ಉದ್ದಾನ ಶಿವಯೋಗಿಗಳವರ, ಶ್ರೀ ಅಟವೀ ಸ್ವಾಮಿಗಳ, ಶ್ರೀ ಮರುಳಾರಾಧ್ಯರ ಗದ್ದುಗೆಗಳನ್ನು ಹೂವುಗಳಿಂದ ಅಲಂಕರಿಸಲಾಗಿತ್ತು. ಬೆಳಗಿನ ಪೂಜೆಯ ನಂತರ ಪೂಜ್ಯ ಶ್ರೀಗಳವರು ತಮ್ಮ ಆರಾಧ್ಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳವರ ಗದ್ದುಗೆಗೆ ಹೋಗಿ ಭಕ್ತಿನಮನ ಸಲ್ಲಿಸಿದರು.

## ಪ್ರಧಾನಮಂತ್ರಿ ಶ್ರೀ ಮೋದಿಯವರಿಂದ ಹುಟ್ಟುಹಬ್ಬದ ಶುಭಾಶಯ

ಪರಮಪೂಜ್ಯ ಶ್ರೀ ಶ್ರೀಗಳವರ ೧೧೦ನೇ ಹುಟ್ಟು ಹಬ್ಬಕ್ಕೆ ಭಾರತದ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಟ್ವೀಟರ್ ಮೂಲಕ ಶುಭಾಶಯ ಕೋರಿದ್ದಾರೆ. ಸಮಾಜಕ್ಕೆ ಶ್ರೀಗಳು ನೀಡಿರುವ ಸೇವೆ ಹಲವರ ಮೇಲೆ ಧನಾತ್ಮಕ ಪ್ರಭಾವ ಉಂಟು ಮಾಡಿದೆ ಎಂದಿದ್ದಾರೆ.

## ಭವ್ಯ ಮೆರವಣಿಗೆ

ಪರಮಪೂಜ್ಯ ಶ್ರೀ ಶ್ರೀಗಳವರನ್ನು ಹಳೆಯ ಮಠದಿಂದ ಪೂರ್ಣಕುಂಭಗಳೊಂದಿಗೆ ಶ್ರೀ ಗೋಸಲ ಸಿದ್ದೇಶ್ವರ ವೇದಿಕೆಗೆ, ವೀರಗಾಸೆ, ನಂದಿಧ್ವಜ, ಕೊಡಗು ನೃತ್ಯ ಮೊದಲಾದ ಜನಪದ ಕಲಾ ತಂಡಗಳೊಂದಿಗೆ ಹಾಗೂ ಮಂಗಳ ವಾದ್ಯದೊಂದಿಗೆ ಕರೆತರಲಾಯಿತು. ಮೆರವಣಿಗೆಯಲ್ಲಿ ಕರ್ನಾಟಕದ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ವಾಜುಭಾಯಿ ಆರ್. ವಾಲಾ, ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ವಿಜಯಪುರ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಶ್ರೀ ಸಿದ್ದೇಶ್ವರ ಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರೂ ಸೇರಿದಂತೆ ಗಣ್ಯರು, ಭಕ್ತರು ಭಾಗವಹಿಸಿದ್ದರು.

ಕಾರ್ಯಕ್ರಮ ಶ್ರೀಮಠದ ವಿದ್ಯಾರ್ಥಿಗಳ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪನವರು ಸರ್ವರಿನ್ನು ಪ್ರೀತಿಯಿಂದ ಸನ್ಮಾನಿಸಿದರು. ಗೌರವಾನ್ವಿತ ರಾಜ್ಯಪಾಲರು ವಿದ್ಯುತ್ ಗುಂಡಿಯನ್ನು ಒತ್ತುವುದರ ಮೂಲಕ ೧೧೦ ದೀಪಗಳನ್ನು ಬೆಳಗಿಸಿದಾಗ ಒಂದು ಕ್ಷಣ ಸಭೆಯಲ್ಲಿ ವಿದ್ಯುತ್ ಸಂಚಾರ ವಾದಂತಾಯಿತು. ಕಿಕ್ಕರಿದು ತುಂಬಿದ ಪ್ರೇಕ್ಷಕರು ಈ ದೃಶ್ಯವನ್ನು ಕಣ್ತುಂಬಿಸಿಕೊಂಡು ಧನ್ಯರಾದವೆಂದು ಕೊಂಡರು.


ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಸುತ್ತೂರು ಜಗದ್ಗುರುಗಳು ಹಾಗೂ ಜ್ಞಾನಯೋಗಾಶ್ರಮದ ಶ್ರೀ ಶ್ರೀಗಳವರು.






ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಆಪ್ತ ಸಮಾಲೋಚನೆಯಲ್ಲಿ ಮಾನ್ಯ ರಾಜ್ಯಪಾಲರು

ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಗೌರವಾನ್ವಿತ ರಾಜ್ಯಪಾಲರು "ಭಾರತೀಯ ಸಂಸ್ಕೃತಿಯು ಶ್ರೇಷ್ಠವಾದುದು. ಆದರ ಇಂದು ಅಂತಹ ಸಂಸ್ಕೃತಿಯನ್ನೇ ಮರೆತು ಬಿಟ್ಟಿದ್ದೇವೆ ಎಂದು ವಿಷಾದಿಸಿದರು. ಭಾರತೀಯ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಸಂಸ್ಕೃತ ಭಾಷೆ ಸೇತುವೆಯಾಗಿದೆ. ಎಲ್ಲ ಭಾಷೆಗಳ ಮೂಲವಾಗಿರುವ ಸಂಸ್ಕೃತವನ್ನು ಶ್ರೀಮಠದಲ್ಲಿ ಪೂಜ್ಯ ಶ್ರೀಗಳವರು ೧೦ ಸಾವಿರ ವಿದ್ಯಾರ್ಥಿಗಳಿಗೆ ಕಲಿಸುವ ಮೂಲಕ ಭಾರತೀಯ ಸಂಸ್ಕೃತಿ ಬೆಳೆಸುವಲ್ಲಿ ಅವರು ಮಾಡುತ್ತಿರುವ ಸೇವೆ ಅನನ್ಯವಾದುದು. ಕಾನ್ವೆಂಟ್ ಶಾಲೆಗಳಲ್ಲಿ ದೊರಕದಿರುವ ಸಂಸ್ಕೃತಿಯ ಜ್ಞಾನವು ಇಲ್ಲಿನ ಸಂಸ್ಕೃತ ಶಿಕ್ಷಣದಿಂದ ದೊರೆಯುತ್ತಿದೆ. ಸಂಸ್ಕೃತ ಕಲಿಯುವ ಮಕ್ಕಳಿಗೆ ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವ ಎಂಬಂತಹ ಮೌಲ್ಯಗಳನ್ನು ಕಲಿಸಲಾಗುವುದು.

ಸ್ವಾಮಿ ವಿವೇಕಾನಂದರು ಬದುಕಿದ್ದು ೩೯ ವರ್ಷ ಮಾತ್ರ. ಆದರೆ ಅವರು ಅಷ್ಟು ಅಲ್ಪ ಅವಧಿಯಲ್ಲಿಯೇ ಭಾರತೀಯ ಸಂಸ್ಕೃತಿಯನ್ನು ಜಗತ್ತಿಗೆಲ್ಲ ಸಾರಿದರು. ನಾವು ಎಷ್ಟು ವರ್ಷ ಬದುಕಿದವು ಎನ್ನುವುದು ಮುಖ್ಯವಲ್ಲ, ಯಾವ ರೀತಿ ಬದುಕಿದೆವು ಎನ್ನುವುದು ಮುಖ್ಯ. ಹಣವಂತನಾಗುವುದಕ್ಕಿಂತ ಗುಣವಂತನಾಗಬೇಕು. ಅಂತಹ ಸಾರ್ಥಕ ಬದುಕು ನಮ್ಮದಾಗಬೇಕು.

ಮನುಷ್ಯ ಜ್ಞಾನಿಯಾದರಷ್ಟೇ ಸಾಲದು, ಆ ಜ್ಞಾನ ಸಂಸ್ಕಾರಯುತವಾಗಿರಬೇಕು. ಆ ಜ್ಞಾನವನ್ನು ಕ್ರಿಯಾತ್ಮಕಗೊಳಿಸಬೇಕು ಎಂದು ಸಲಹೆ ನೀಡಿದರು. ಪೂಜ್ಯ ಸಿದ್ಧಗಂಗಾ ಶ್ರೀಗಳವರು ಚಾರಿತ್ರ್ಯವಂತ ವಿದ್ಯಾರ್ಥಿಗಳನ್ನು ನಿರ್ಮಾಣ ಮಾಡುವುದಲ್ಲದೆ ಅವರಿಗೆ ಮೌಲ್ಯಯುತ ಶಿಕ್ಷಣ ನೀಡುವ ಮೂಲಕ ಸಮಾಜದ ಆಸ್ತಿಯನ್ನಾಗಿ ಮಾಡಿದ್ದಾರೆ ಎಂದು ಪ್ರಶಂಸಿದರು. ಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆ ಅಮೋಘವಾದುದು ಎಂದು ಬಣ್ಣಿಸಿದರು. "ಭಾರತ ಮಾತಾಕಿ ಜೈ" ಎಂದು ಮೂರು ಬಾರಿ ಜಯಕಾರದ


ಪರಮಪೂಜ್ಯ ಶ್ರೀ ಶ್ರೀಗಳವರನ್ನು ಭವ್ಯವಾದ ಮೆರವಣಿಗೆಯಲ್ಲಿ ಶ್ರೀ ಗೋಸಲ ಸಿದ್ಧೇಶ್ವರ ಸಭಾ ವೇದಿಕೆಗೆ ಬರಮಾಡಿಕೊಳ್ಳುತ್ತಿರುವುದು.



ಮೆರವಣಿಗೆಯಲ್ಲಿ ಜನಪದ ಕಲಾ ತಂಡಗಳು

ಮೂಲಕ ಸಭಿಕರಲ್ಲಿ ರಾಷ್ಟ್ರಪ್ರಜ್ಞೆಯನ್ನು ಮೂಡಿಸಿದ ರಾಜ್ಯಪಾಲರು ದೇಶ ರಕ್ಷಣೆಗಾಗಿ ಪ್ರಾಣಾರ್ಪಣೆ ಮಾಡಿದವರನ್ನು ಸ್ಮರಿಸುತ್ತಾ ಘೋಷಣೆ ಕೂಗಬೇಕೆಂದು ಮನವಿ ಮಾಡಿದರು.




ಮಾನ್ಯ ರಾಜ್ಯಪಾಲರಾದ ಶ್ರೀ ವಾಜುಭಾಯಿ ಆರ್. ವಾಲಾ ಅವರಿಂದ ಉದ್ಘಾಟನಾ ಭಾಷಣ



ಗೌರವಾನ್ವಿತ ರಾಜ್ಯಪಾಲರಿಗೆ ಗೌರವ ಸಮರ್ಪಣೆ

## ನುಡಿನಮನ :

ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ನುಡಿನಮನ ಸಲ್ಲಿಸುತ್ತಾ ಬಿಸಿಲು ಬಹಳವಿದೆ. ಹೃದಯದಲ್ಲಿ ತಂಪಿದೆ, ಪೂಜ್ಯರ ಅನುಗ್ರಹದ ನೆರಳು ನಿಮ್ಮ ಮನಸ್ಸಿನಲ್ಲಿದೆ. ಈ ಸಂದರ್ಭದಲ್ಲಿ ಡಾ. ಅಬ್ದುಲ್ ಕಲಾಂ ಅವರು ಪೂಜ್ಯರ ಬಗ್ಗೆ ಹೇಳಿದ




ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ನುಡಿನಮನ

ಮಾತುಗಳನ್ನು ಸ್ಮರಿಸಿದರು. "ವಿದ್ಯಾರ್ಥಿ ದೇವೋಭವ" ಎಂಬ ಉದಾತ್ತ ಭಾವದಿಂದ ಪೂಜ್ಯ ಶ್ರೀಗಳವರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ವಿಸ್ತರಿಸಿ, ಮರಳುಗಾಡಿನಲ್ಲಿ ಓಯಸಿಸ್ ರೀತಿಯಲ್ಲಿ ಬಡವರ ಪಾಲಿಗೆ ನೆರಳಾಗಿದ್ದಾರೆ. ಕಳೆದ ೮೭ ವರ್ಷಗಳಿಂದ ಸೇವೆಯಲ್ಲಿ ತಮ್ಮನ್ನು ಸಮರ್ಪಿಸಿಕೊಂಡು ಜ್ಞಾನ ಭಾಸ್ಕರರಾಗಿದ್ದಾರೆ. ಸಾಮಾಜಿಕ ಸೇವಾ ಕಾರ್ಯಗಳಿಂದ ಸಿದ್ಧಗಂಗೆ ಮತ್ತು ಸುತ್ತೂರು ಮಠಗಳು ಎರಡು ಕಣ್ಣುಗಳಿದಂತೆ ಎಂದು ಹೇಳಿದರು.





## ಸಂದೇಶ ಸಿರಿ ಗ್ರಂಥ ಬಿಡುಗಡೆ :

ಪ್ರೊ. ಹೆಚ್.ವಿ. ವೀರಭದ್ರಯ್ಯ ಮತ್ತು ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರ ಸಂಪಾದಕತ್ವದಲ್ಲಿ ೮೩೪ ಪುಟಗಳ



ಶ್ರೀ ಬಸವರಾಜಪ್ಪ
ಲಕ್ಷ್ಮೀಪುರ



ಶ್ರೀ ಡಿ.ಎಂ. ರಾಮಾಂಜಿನಪ್ಪ
ದೊಂಬರಹಳ್ಳಿ

ಗ್ರಂಥ (ಪರಮಪೂಜ್ಯ ಶ್ರೀಗಳವರು ೧೦-೧೨-೨೦೦೩ ರಿಂದ ೧೫-೩-೨೦೧೭ ರವರೆಗೆ ದಯಪಾಲಿಸಿದ ಸಂದೇಶಗಳು) 'ಸಂದೇಶ ಸಿರಿ'ಯನ್ನು ವಿಜಯಪುರ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳು ಲೋಕಾರ್ಪಣೆ ಮಾಡಿದರು. ಈ ಗ್ರಂಥದ ದಾಸೋಹಿಗಳು ಶ್ರೀಮಠದ ಸದ್ಭಕ್ತರಾದ ಶ್ರೀ ಬಸವರಾಜಪ್ಪ ಲಕ್ಷ್ಮೀಪುರ ಮತ್ತು ದೊಂಬರಹಳ್ಳಿಯ ಶ್ರೀ ಡಿ.ಎಂ. ರಾಮಾಂಜಿನಪ್ಪ ಅವರು. ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು ಮಾತನಾಡಿ "ಪೂಜ್ಯ ಶ್ರೀಗಳವರು ಬದುಕನ್ನೇ ಯೋಗ ಮಾಡಿಕೊಂಡವರು. ಅಂತಹವರನ್ನು ನೆನಪಿಸಿಕೊಳ್ಳುವುದು ನಮ್ಮ ಸೌಭಾಗ್ಯ. ಅವರ ಜೀವನ ಆಪ್ಯಾಯಮಾನವಾಗಿದೆ. ಕವಿ ರವೀಂದ್ರನಾಥ ಟಾಗೋರ್ ಅವರು 'ಬದುಕಬೇಕು ಹೇಗೆಂದರೆ ನಮ್ಮ ಬದುಕು ನಮಗೆ ಸಂತೋಷ ಕೊಡಬೇಕು, ನಮ್ಮ ಸುತ್ತಲಿನವರಿಗೆ ಸಂತೋಷ ಉಂಟುಮಾಡಬೇಕು




ಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರಿಂದ 'ಸಂದೇಶ ಸಿರಿ' ಲೋಕಾರ್ಪಣೆ.

ನಮ್ಮ ಬದುಕು ದೇವರು ಮೆಚ್ಚುವಂತಿರಬೇಕು' ಎಂದಿದ್ದಾರೆ. ಪೂಜ್ಯ ಶ್ರೀಗಳವರ ಬದುಕು ಆ ರೀತಿಯಾಗಿದೆ. ಅವರ ಬದುಕು ಜನರನ್ನು ಪುನೀತರನ್ನಾಗಿಸಿದೆ. ಲಕ್ಷಾಂತರ ಜನರಿಗೆ ವಿದ್ಯೆ ಕೊಟ್ಟು ಆಸರೆ ನೀಡಿದ್ದಾರೆ. ಅವರಿಗೆ ನಾವೆಲ್ಲ ಹೃದಯ ತುಂಬಿ ತಲೆಬಾಗೋಣ" ಎಂದು ನುಡಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ನುಡಿನಮನದಲ್ಲಿ 'ಜನ್ಮ ದಿನೋತ್ಸವ, ಗುರುವಂದನೆ, ಎಲ್ಲ ಆಚರಣೆ ಬಿರುದು ಬಿನ್ನಾಣಗಳು ಪೂಜ್ಯ ಶ್ರೀಗಳಿಗೆ ಬೇಕಿಲ್ಲ. ಅದನ್ನೆಲ್ಲ ಮೀರಿ ಶ್ರೀಗಳವರು ನಿಂತಿದ್ದಾರೆ. ಶ್ರೀಗಳ ಸೇವಾ ಕೈಂಕರ್ಯವನ್ನು ಇಂದು ಇಡೀ ಜಗತ್ತೇ ಗುರುತಿಸುತ್ತಿದೆ. ಅಂತಹ ಮಹಾತ್ಮರ ಜೊತೆಯಲ್ಲಿ ನಾವಿರುವುದೇ ನಮ್ಮ ಪುಣ್ಯ ವಿಶೇಷವಾಗಿದೆ. ಪೂಜ್ಯರ ವ್ಯಕ್ತಿತ್ವದ ದಿವ್ಯ ಪ್ರಭಾವಕ್ಕೊಳಗಾಗಿರುವ ಲಕ್ಷಾಂತರ ಭಕ್ತರು ಗುರುವಂದನಾ ಮಹೋತ್ಸವವನ್ನು ಭಕ್ತಿ, ಪ್ರೀತಿಯಿಂದ ಆಚರಿಸುತ್ತಿದ್ದಾರೆ. ವಿದ್ಯಾರ್ಥಿಗಳ ಕ್ಷೇಮವನ್ನು ತಮ್ಮ ಕರ್ತವ್ಯವೆಂದು ಭಾವಿಸಿದ ಶ್ರೀಗಳು ಮಾತೃಸ್ವರೂಪರಲ್ಲಿ ಸಿದ್ಧಗಂಗಾ ಮಠವನ್ನು ಬೆಳಗಿಸಿದ್ದಾರೆ ಎಂದು ಬಣ್ಣಿಸಿದರು.



ಶ್ರೀ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಂದ ನುಡಿನಮನ

ಉತ್ತರ ಪ್ರದೇಶದ ನೋಯಿಡಾದಲ್ಲಿ ತಮ್ಮ ಮಠದ ವತಿಯಿಂದ ಏರ್ಪಡಿಸಲಾಗಿದ್ದ ಸಮಾರಂಭದಲ್ಲಿ ನಡೆದ ಘಟನೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು. ಆಗ ಶ್ರೀಗಳವರಿಗೆ ೯೮ ವರ್ಷ. ಪೂಜ್ಯರು ಆಹ್ವಾನಿತರಾಗಿದ್ದರು. ಆಗ ಡಾ. ಅಬ್ದುಲ್ ಕಲಾಂ ರಾಷ್ಟ್ರಪತಿಗಳಾಗಿದ್ದು ಅವರೂ ಆಹ್ವಾನಿತರಾಗಿದ್ದರು. ಶ್ರೀ ಸಿದ್ಧಗಂಗಾ ಶ್ರೀಗಳವರು ಮುಖವನ್ನು ದಿಟ್ಟಿಸಿ ನೋಡಿದ ಡಾ. ಕಲಾಂ ಅವರು ಶ್ರೀಗಳವರ ಮುಖಪ್ರಭಾವಕ್ಕೆ ಒಳಗಾದರು. ಸಿದ್ಧಗಂಗಾ ಮಠ ಎಲ್ಲಿದೆ ? ನಾನು ಭೇಟಿ ಕೊಡುತ್ತೇನೆ ಎಂದು ಸ್ವಯಂ

ಪ್ರೇರಣೆಯಿಂದ ಕಲಾಂ ಹೇಳಿದರು. ಇದು ಶ್ರೀಗಳವರ ವ್ಯಕ್ತಿತ್ವಕ್ಕೊಂದು ನಿದರ್ಶನ ಎಂದು ಹೇಳಿದರು.

**ಪೂಜ್ಯ ಶ್ರೀಗಳಿಗೆ ೧೧೪ ವರ್ಷ :**

ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಪೂಜ್ಯ ಶ್ರೀ ಶ್ರೀಗಳಿಗೆ ೧೧೪ ಎಂದು ಹೇಳುವುದರ ಮೂಲಕ ಅಚ್ಚರಿ ಮೂಡಿಸಿದರು. ಅವರು ಶ್ರೀಗಳಿಗೆ ೧೧೦ ವರ್ಷವಾಗಿದೆ ಎಂದು ನಾವೆಲ್ಲ ಸಂಭ್ರಮಿಸುತ್ತಿದ್ದೇವೆ. ಆದರೆ ಅವರ ವಯಸ್ಸು ೧೧೪ ವರ್ಷ. ಅವರ ತಂದೆ ತಾಯಿ ಅನಕ್ಷರಸ್ಥರಾಗಿದ್ದ ಕಾರಣದಿಂದ ದಿನಾಂಕದ ಬಗ್ಗೆ ತಿಳುವಳಿಕೆ ಹೊಂದಿರಲಿಲ್ಲ. ಶಾಲೆಗೆ ಸೇರಿಸುವಾಗಿನ ಮಾಸ್ತರು ದಾಖಲಿಸಿದ ದಿನಾಂಕವೇ ಈಗ ರೂಢಿಯಲ್ಲಿದೆ. ಈ ಬಗ್ಗೆ ಶ್ರೀಗಳವರೇ ಶಿಷ್ಯರ ಬಳಿ ಸಾಕಷ್ಟು ಸಲ ಹೇಳಿಕೊಂಡಿದ್ದರು ಎಂದು ತಿಳಿಸಿದರು.


ಪರಮಪೂಜ್ಯ ಶ್ರೀ ಶ್ರೀಗಳವರಿಂದ ಶ್ರೀ ಸುತ್ತೂರು ಜಗದ್ಗುರುಗಳಿಗೆ ಗೌರವ ಸಮರ್ಪಣೆ.

**ಪೂಜ್ಯ ಶ್ರೀಗಳವರಿಂದ ಆಶೀರ್ವಚನ :**

ನೂರಹತ್ತು ವಸಂತಗಳಿಗೆ ಶಿವಹೆಜ್ಜೆಗಳನ್ನಿಡುತ್ತಿರುವ ಪೂಜ್ಯ ಶ್ರೀಗಳವರು ಲಿಖಿತ ಆಶೀರ್ವಾದವನ್ನು ಕನ್ನಡಕ ಬಳಸದೆ ಸುಲಲಿತವಾಗಿ ಓದುವ ಮೂಲಕ ಭಕ್ತರಿಗೆ ಆಶೀರ್ವಚನ ನೀಡಿದರು. ಆಶೀರ್ವಚನದಲ್ಲಿ ತಮ್ಮ ಪೂಜ್ಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳನ್ನು ಮನತುಂಬಿ ಸ್ಮರಿಸಿದ ಪೂಜ್ಯ ಶ್ರೀಗಳು ೧೯೧೭ರಲ್ಲಿ ಸನಿವಾಸ ಸಂಸ್ಕೃತ ಪಾಠಶಾಲೆ ಪ್ರಾರಂಭಿಸಿ ಎಲ್ಲ ಜಾತಿ ಮತ ಪಂಥದ ವಿದ್ಯಾರ್ಥಿಗಳಿಗೆ ಅವಕಾಶ ಕೊಟ್ಟು ಜಾತ್ಯಾತೀತ ನೀತಿಗೆ ಭವ್ಯ ತಳಹದಿ ಹಾಕಿದುದನ್ನು ನೆನೆಪಿಸಿಕೊಂಡು, ಜಾತ್ಯಾತೀತ ನೀತಿ ಶ್ರೀಮಠದ ಬೆಳವಣಿಗೆಯ ಶಕ್ತಿಮೂಲ ಎಂದು ತಿಳಿಸಿದರು.

ಶತಮಾನಗಳ ಕಾಲ ಪರಕೀಯರ ಆಡಳಿತದಲ್ಲಿದ್ದ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ನಮ್ಮ ದೇಶ ೧೯೪೭ರಲ್ಲಿ ಸ್ವಾತಂತ್ರ್ಯವನ್ನು ಪಡೆದು ಪ್ರಪಂಚದಲ್ಲಿ ಅತಿ ದೊಡ್ಡ ಪ್ರಜಾಪ್ರಭುತ್ವವಾಗಿ ರೂಪುಗೊಂಡು ೭೦ ವರ್ಷಗಳಾಗಿವೆ. ಸಾಕಷ್ಟು ಅಭಿವೃದ್ಧಿ ಕೆಲಸಗಳಾಗಿವೆ. ಚುನಾಯಿತ ಕೇಂದ್ರ, ರಾಜ್ಯ ಸರ್ಕಾರಗಳು ಆಡಳಿತದಲ್ಲಿವೆ. ಆದರೆ ಚುನಾವಣೆಯಲ್ಲಿ ಆಸೆ, ಆಮಿಷಗಳಿಗೆ ಒಳಗಾಗದೆ ಒಳ್ಳೆಯತನವನ್ನು ಚುನಾಯಿಸುವುದು ಎಲ್ಲರ ಕರ್ತವ್ಯ. ಹಾಗಾದಲ್ಲಿ ಅಭಿವೃದ್ಧಿಯನ್ನು ನಿರೀಕ್ಷಿಸಲು ಸಾಧ್ಯ ಎಂದು ಸಲಹೆ ನೀಡಿದರು. ಬ್ರಿಟಿಷ್ ಪಾರ್ಲಿಮೆಂಟ್‌ನಲ್ಲಿ ೧೯೩೫ರ ಫೆಬ್ರವರಿ ೨ ರಂದು ಲಾರ್ಡ್ ಮೆಕಾಲೆ ಮಾಡಿದ ಭಾಷಣವನ್ನು ಉಲ್ಲೇಖಿಸಿದ ಪೂಜ್ಯ ಶ್ರೀಗಳು ವಿದ್ಯಾಭ್ಯಾಸ ಕ್ರಮದಲ್ಲಿ ಬದಲಾವಣೆ ಅವಶ್ಯಕ ಎಂದು ಹೇಳಿದರು.

ಕಾರ್ಯಕ್ರಮವನ್ನು ಡಾ. ಸಿ. ಸೋಮಶೇಖರ್ ನಿರೂಪಿಸಿದರು. ಶ್ರೀ ಗೋವಿಂದರಾಜು ಅವರು ಶರಣು ಸಮರ್ಪಣೆ ಮಾಡಿದರು.

**ದಾಸೋಹ ವ್ಯವಸ್ಥೆ :**

'ಸಿದ್ಧಗಂಗೆ ಊಟಕ್ಕೆ ಚಂದ, ಶಿವಗಂಗೆ ನೋಟಕ್ಕೆ ಚಂದ' ಎಂಬ ನಾಣ್ಣುಡಿಯಂತೆ ಶ್ರೀಮಠದಲ್ಲಿ ಯಾವುದೇ ಸಮಾರಂಭವಾಗಲಿ ಪ್ರಸಾದಕ್ಕೆ ಕೊರತೆಯಾಗುವುದಿಲ್ಲ. ಲಕ್ಷಾಂತರ ಭಕ್ತರಿಗೆ ಯಾವುದೇ ರೀತಿಯ ಚ್ಯುತಿಯುಂಟಾಗದಂತೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವ ಹಾಗೂ ಮಾರ್ಗದರ್ಶನದಲ್ಲಿ ಅಚ್ಚುಕಟ್ಟಾಗಿ ವ್ಯವಸ್ಥೆ ಮಾಡಲಾಗಿತ್ತು. ಬಂಡೇಮಠದ ಶ್ರೀಗಳು, ಹೊನ್ನಮ್ಮಗವಿ ಮಠದ ಶ್ರೀಗಳವರು ಸೇರಿದಂತೆ ಅನೇಕ ಗ್ರಾಮಗಳ ಭಕ್ತರು ದಾಸೋಹ ವ್ಯವಸ್ಥಿತವಾಗಿ ನಡೆಯುವಂತೆ ನೋಡಿಕೊಂಡರು. ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಬೋಧಕ, ಬೋಧಕೇತರ ಸಿಬ್ಬಂದಿ ದಾಸೋಹ ಸೇವೆಯಲ್ಲಿ ತೊಡಗಿಸಿಕೊಂಡಿದ್ದರು.






ಪತ್ರಿಕಾ ಮಾಧ್ಯಮದ ಪ್ರತಿನಿಧಿಗಳು


ಶ್ರೀ ಎಂ.ವಿ. ರಾಜಶೇಖರನ್, ಡಾ. ಗೊ.ರು.ಚನ್ನಬಸಪ್ಪ ಮೊದಲಾದ ಗಣ್ಯರು

ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಸಮಾರಂಭದಲ್ಲಿ ಭಾಗವಹಿಸಿದವರೆಲ್ಲರೂ ಸಂತೋಷದಿಂದ ಪ್ರಸಾದ ಸ್ವೀಕರಿಸಬೇಕೆಂಬುದಾಗಿದೆ, ಅವರ ಆಶಯಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳಲಾಯಿತು. ಶ್ರೀಮಠದಲ್ಲಿ ಒಂಭತ್ತು ಕಡೆ ಏಕಕಾಲಕ್ಕೆ ಕುಳಿತು ಹದಿನೆಂಟು ಸಾವಿರ ಜನ ಊಟ ಮಾಡಲು ವ್ಯವಸ್ಥೆ ಮಾಡಲಾಗಿತ್ತು. ೫೦ ಕ್ವಿಂಟಾಲ್ ಸಿಹಿ ಬೂಂದಿ, ೪೦ ಕ್ವಿಂಟಾಲ್ ಮಾಲ್ದಿ, ೨೦ ಕ್ವಿಂಟಾಲ್ ಖಾರ ಬೂಂದಿ ಮಾಡಲಾಗಿತ್ತು. ಚಿತ್ರಾನ್ನ, ಕೋಸಂಬರಿ, ಉಪ್ಪಿನಕಾಯಿ, ಸಾಂಬಾರು, ಅನ್ನ, ಮೊಸರನ್ನ, ಮಜ್ಜಿಗೆ ಪಲ್ಯ ಪ್ರಸಾದದಲ್ಲಿ ಸೇರಿದ್ದವು.




ದಾಸೋಹದ ಒಂದು ನೋಟ

**ಶ್ರೀಮಠಕ್ಕೆ ಗಣ್ಯರ ದಂಡು :**

ಪೂಜ್ಯ ಶ್ರೀಗಳವರಿಗೆ ಹುಟ್ಟು ಹಬ್ಬದ ಶುಭಾಶಯ ಕೋರಲು ಶ್ರೀಮಠಕ್ಕೆ ಗಣ್ಯರು ಆಗಮಿಸಿ ಪೂಜ್ಯರ ದರ್ಶನಾಶೀರ್ವಾದ ಪಡೆದು ಶುಭಹಾರೈಸಿದರು. ಉಪ ಲೋಕಾಯುಕ್ತ ಶ್ರೀ ಸುಭಾಷ್ ಬಿ. ಅಡಿ, ಜಿಲ್ಲಾಧಿಕಾರಿ ಶ್ರೀ ಕೆ.ಪಿ. ಮೋಹನ್‌ರಾಜ್, ಕೇಂದ್ರ ವಲಯ ಐಜಿಪಿ ಶ್ರೀ ಸೀಮಂತಕುಮಾರ್ ಸಿಂಗ್, ತುಮಕೂರು ಜಿಲ್ಲೆ ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಇಶಾಪಂತ್, ಜಿಲ್ಲಾ ಪಂಚಾಯತ್ ಕಾರ್ಯನಿರ್ವಹಣಾಧಿಕಾರಿ ಶ್ರೀ ಕೆ.ಜಿ. ಶಾಂತರಾಂ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ, ಅನುಭವ ಮಂಟಪ ನಿರ್ಮಾಣ ಸಲಹಾ ಸಮಿತಿ ಅಧ್ಯಕ್ಷರೂ, ಜಾನಪದ ವಿದ್ವಾಂಸರಾದ ಡಾ. ಗೊ.ರು.ಚನ್ನಬಸಪ್ಪನವರು, ಹಿರಿಯ ವಿದ್ವಾಂಸರಾದ ಡಾ. ಎಂ.ಜಿ. ನಾಗರಾಜ್, ಬೆಂಗಳೂರಿನ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ, ಮಾಜಿ ಉಪ ಮಹಾಪೌರರಾದ ಶ್ರೀ ಬಿ.ಎಸ್. ಪುಟ್ಟರಾಜು, ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ಜಿ. ನಾಗಸುಂದರ್, ಮಾಜಿ ಸಂಸದ ಶ್ರೀ ಜಿ.ಎಸ್. ಬಸವರಾಜು, ಮಾಜಿ ಸಚಿವ ಶ್ರೀ ಸೊಗಡು ಶಿವಣ್ಣ, ಶ್ರೀ ಜಿ.ಬಿ. ಜ್ಯೋತಿಗಣೇಶ, ಶಾಸಕರಾದ ಶ್ರೀ ಸುರೇಶಗೌಡ, ಶ್ರೀ ಎಸ್. ರಫೀಕ್ ಅಹಮದ್, ಜಿ.ಪಂ. ಅಧ್ಯಕ್ಷೆ ಶ್ರೀಮತಿ ಲತಾ ಸೇರಿ ಅನೇಕ ಜನ ಗಣ್ಯರು ಆಗಮಿಸಿ ಆಶೀರ್ವಾದ ಪಡೆದರು.

**ವಿಶೇಷ ಪುರವಣಿ :**

ಪೂಜ್ಯರ ಹುಟ್ಟುಹಬ್ಬದ ಶುಭ ಸಂದರ್ಭದಲ್ಲಿ ವಿಜಯ ಕರ್ನಾಟಕ ಹಾಗೂ ವಿಜಯವಾಣಿ ಪತ್ರಿಕಾ ಸಮೂಹ ವಿಶೇಷ ಪುರವಣಿಗಳನ್ನು ತರುವುದರ ಮೂಲಕ ಪೂಜ್ಯ ಶ್ರೀಗಳಿಗೆ ಗೌರವ ಸಮರ್ಪಣೆ ಮಾಡಿದ್ದು ವಿಶೇಷವಾಗಿತ್ತು. ನಾಡಿನ ಪ್ರಮುಖ ದಿನಪತ್ರಿಕೆಗಳು ಪೂಜ್ಯರನ್ನು ಕುರಿತ ವಿಶೇಷ ಲೇಖನಗಳನ್ನು ಪ್ರಕಟಿಸಿ ಭಕ್ತಿ ನಮನವನ್ನು ಸಲ್ಲಿಸಿತು.

# ತುಮಕೂರು ನಾಗರಿಕ ಸಮಿತಿಯಿಂದ ಗುರುವಂದನಾ ಕಾರ್ಯಕ್ರಮ

ಏಪ್ರಿಲ್ ೧, ತುಮಕೂರು ನಗರದಲ್ಲಿ ಹಬ್ಬದ ವಾತಾವರಣ, ಬೀದಿ ಬೀದಿಗಳಲ್ಲಿ ತಳಿರು ತೋರಣಗಳ ಸಿಂಗಾರ, ಪೂಜ್ಯ ಶ್ರೀಗಳವರ ಹುಟ್ಟು ಹಬ್ಬಕ್ಕೆ ಶುಭಾಶಯ ಕೋರುವ ಫ್ಲೆಕ್ಸ್‌ಗಳು, ಬಡಾವಣೆಗಳಲ್ಲಿ ಪಾನಕ, ಮಜ್ಜಿಗೆ, ಕೋಸಂಬರಿ ಸೇವೆ, ಮನೆ ಮನೆಗಳಲ್ಲಿ ಪೂಜ್ಯರ ಭಾವಚಿತ್ರಕ್ಕೆ ಪೂಜೆ, ಇನ್ನೂ ಹತ್ತಾರು ವರ್ಷಗಳು ನಮಗೆಲ್ಲ ಮಾರ್ಗದರ್ಶನ ಮಾಡುವಂತೆ ಅನುಗ್ರಹಿಸು ಎಂದು ಪರಶಿವನಲ್ಲಿ ಭಕ್ತಿಯಿಂದ ಪ್ರಾರ್ಥನೆ. ಈ ಅಪರೂಪದ ದೃಶ್ಯ ತುಮಕೂರು ನಗರಕಷ್ಟೇ ಸೀಮಿತವಾಗಿರಲಿಲ್ಲ. ತುಮಕೂರು ಜಿಲ್ಲೆಯಾ ಗುಬ್ಬಿ, ಕುಣಿಗಲ್, ತುರುವೇಕೆರೆ, ಊರುಕೆರೆ, ಚೇಳೂರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ಜಿಲ್ಲೆಯೂ ಸೇರಿದಂತೆ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿಯೂ ಇದೇ ರೀತಿಯ ಹಬ್ಬದ ವಾತಾವರಣ. ನಡೆದಾಡುವ ದೇವರಿಗೆ ಹೃದಯ ತುಂಬಿದ ಭಕ್ತಿಪೂರ್ವಕ ನಮನ ಸಲ್ಲಿಸುವ ದೃಶ್ಯ ಎಲ್ಲೆಡೆ ಕಂಡುಬರುತ್ತಿತ್ತು.

ತುಮಕೂರಿನಲ್ಲಿ ಯಾವುದೇ ಕಾರ್ಯಕ್ರಮ ನಡೆಯಲಿ ಎಲ್ಲವೂ ವ್ಯವಸ್ಥಿತವಾಗಿ ನಡೆಯುತ್ತದೆ. ಕಳೆದ ವರ್ಷದಂತೆ ಈ ವರ್ಷವೂ ತುಮಕೂರಿನ ನಾಗರಿಕರು ಏರ್ಪಡಿಸಿದ್ದ ಪರಮಪೂಜ್ಯರ ೧೧೦ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಕಾರ್ಯಕ್ರಮ ಸರ್ಕಾರಿ ಪದವಿಪೂರ್ವ ಕಾಲೇಜಿನ ವಿಶಾಲವಾದ ಆವರಣದಲ್ಲಿ ನಿರ್ಮಿಸಿದ ಬೃಹತ್ ವೇದಿಕೆಯಲ್ಲಿ ಅರ್ಥಪೂರ್ಣವಾಗಿ ನಡೆಯಿತು. ಈ ಅಭೂತಪೂರ್ವ ಸನ್ನಿವೇಶವನ್ನು ಸಾವಿರಾರು ಮಂದಿ ಭಕ್ತರು, ಅಭಿಮಾನಿಗಳು ಕಣ್ಣನ ತುಂಬಿಸಿಕೊಂಡು ಧನ್ಯತೆಯ ಭಾವವನ್ನು ವ್ಯಕ್ತಪಡಿಸಿದರು. ಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಪುನೀತರಾದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಮಾತನಾಡಿ ಗೋಸಲ ಸಿದ್ದೇಶ್ವರ, ಯಡಿಯೂರು ಸಿದ್ಧಲಿಂಗೇಶ್ವರರ, ಉದ್ದಾನ ಶಿವಯೋಗಿಗಳ ತಪಸ್ಸಿನ ಶಕ್ತಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಲ್ಲಿ ಮೇಳೈಸಿದೆ. ತೊಟ್ಟಿ ಖಾವಿಗೆ ಪೂಜ್ಯಭಾವನೆ ತಂದುಕೊಟ್ಟ ಪರಿಶುದ್ಧ ವೈಯಕ್ತಿಕ ಬದುಕು ಮಹಾಸ್ವಾಮಿಗಳವರದು. ಸಹಸ್ರಾರು ಸಂಖ್ಯೆಯಲ್ಲಿ ಭಕ್ತರು ಭಾಗವಹಿಸಿ ಶ್ರೀ ಶ್ರೀಗಳವರನ್ನು ದೂರದಿಂದಲೇ



ವೇದಿಕೆಯಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ಶ್ರೀ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು, ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು, ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯ ಮೊದಲಾದ ಗಣ್ಯರು







ಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರಿಂದ ನುಡಿನಮನ

ನೋಡಿ ಧನ್ಯತೆಯನ್ನು ಪಡೆದಿದ್ದಾರೆ. ಪೂಜ್ಯ ಶ್ರೀಗಳು ಅಂತಹ ಮೇರು ವ್ಯಕ್ತಿತ್ವ ಹೊಂದಿದ್ದಾರೆ. ಸ್ವಾಮೀಜಿಯವರು ಇಡೀ ದೇಶವೇ ತಿರುಗಿ ನೋಡುವಂತಹ ಸಾಧನೆ ಮಾಡಲು ಸಾಧ್ಯವಾಗಿದೆ. ನಾಡಿನ ಎಲ್ಲ ಮಠಾಧೀಶರಿಗೂ ಮಾರ್ಗದರ್ಶಿಯಾಗಿದ್ದಾರೆ. ಪೂಜ್ಯ ಶ್ರೀಗಳು ೧೧೦ ವರ್ಷಗಳ ಸಾರ್ಥಕ ಬದುಕಿನಲ್ಲಿ ಒಂದು ಕ್ಷಣವನ್ನೂ ವ್ಯರ್ಥ ಮಾಡಿಲ್ಲ. ಪ್ರತಿಕ್ಷಣವೂ ಮೌಲ್ಯವಾಗಿಸಿಕೊಂಡಿದ್ದಾರೆ. ತಪಸ್ಸು, ಕಾಯಕ ನಿಷ್ಠೆ, ವಿದ್ಯಾರ್ಥಿ ಸ್ನೇಹಿಯಾಗಿ ಪೂಜ್ಯ ಶ್ರೀಗಳು ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಗೋಚರ, ಅಗೋಚರ ಶಕ್ತಿಯ ಲೋಕಕಲ್ಯಾಣದ ತಪಸ್ವಿಗಳು ಇರುವವರೆಗೆ ಶಾಂತಿ ನೆಲಸುತ್ತದೆ ಎಂದು ಸ್ವಾಮಿ ವಿವೇಕಾನಂದರು ತಿಳಿಸಿದ್ದಾರೆ. ಅದಕ್ಕೆ ಜ್ವಲಂತ ನಿದರ್ಶನ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಎಂದು ತಿಳಿಸಿದರು.

ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರು



ಶ್ರೀ ಎಂ.ಎನ್. ವೆಂಕಟಾಚಲಯ್ಯ ಅವರಿಂದ ನುಡಿನಮನ

ತಮ್ಮ ನುಡಿ ನಮನದಲ್ಲಿ ಸ್ವಾಮೀಜಿ ಅವರ ಹುಟ್ಟು ಹಬ್ಬವನ್ನು ಹಬ್ಬದ ರೀತಿಯಲ್ಲಿ ಆಚರಿಸುತ್ತಿರುವುದು ನಮ್ಮೆಲ್ಲರ ಸಾರ್ಥಕ ಕ್ಷಣ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಾಧಕರಿಗೆ ಸ್ಫೂರ್ತಿ, ವೈಯಕ್ತಿಕ ಸ್ವಾರ್ಥದ ಬದುಕಿಗಿಂತ ಸಮಾಜಮುಖಿಯಾಗಿ ಚಿಂತಿಸುವುದನ್ನು ಜಗತ್ತಿಗೆ ತೋರಿಸಿಕೊಟ್ಟ ಸಂತರು ಶ್ರೀ ಸಿದ್ಧಗಂಗಾ ಶ್ರೀಗಳು. ಜಗತ್ತಿನಲ್ಲಿ ತಾಂಡವವಾಡುತ್ತಿರುವ ಎಲ್ಲ ಗಂಭೀರ ಸಮಸ್ಯೆಗಳನ್ನು ಎದುರಿಸಲು ಪೂಜ್ಯರ ಮಾರ್ಗದರ್ಶನ ಅಗತ್ಯವಾಗಿದೆ ಎಂದರು.

ಪೂಜ್ಯ ಶ್ರೀಗಳವರ ಆದರ್ಶದ ಸ್ವಲ್ಪವನ್ನಾದರೂ ನಾವು ಜೀವನದಲ್ಲಿ ಅಳವಡಿಸಿಕೊಂಡರೆ ನಮ್ಮ ಜೀವನ ಸಾರ್ಥಕವಾಗುತ್ತದೆ ಎಂದು ತಿಳಿಸಿದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಆಶೀರ್ವಚನ ನೀಡಿದರು.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ವೇದಿಕೆಯಲ್ಲಿ ವಿಜಯಪುರ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳು, ಯೋಗಗುರು ಡಾ. ನಾಗೇಂದ್ರ, ಜಿಲ್ಲಾಧಿಕಾರಿ ಶ್ರೀ ಕೆ.ಪಿ. ಮೋಹನ್‌ರಾಜ್, ಪ್ರಜಾಪ್ರಗತಿಯ ಸಂಪಾದಕರಾದ ಶ್ರೀ ಎಸ್. ನಾಗಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಶ್ರೀ ಎಸ್. ನಾಗಣ್ಣನವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಪೂಜ್ಯ ಶ್ರೀ ಶ್ರೀಗಳವರ ಜೀವನಗಾಥೆಯನ್ನು ಕುರಿತ ಶೋಭಾ ಯಾತ್ರೆಯೂ ಕರ್ನಾಟಕದ ಮೂರನೇ ಒಂದು ಭಾಗವನ್ನು ಕ್ರಮಿಸಿದೆ. ಭಕ್ತರು ಸಾಕ್ಷಾತ್ ನಡೆದಾಡುವ ದೇವರೇ ತಮ್ಮ ಬಳಿ ಬಂದಂತೆ ಸಂಭ್ರಮಿಸಿದ್ದಾರೆ ಎಂದು ತಿಳಿಸಿದ ಶ್ರೀಯುತರು ಇಂದು ಅಮೇರಿಕಾ ವಾಣಿಜ್ಯ ಕ್ಷೇತ್ರದಲ್ಲಿ, ಬ್ರಿಟನ್ ರಾಜಕೀಯ ಕ್ಷೇತ್ರದಲ್ಲಿ, ಜಪಾನ್ ವಿಜ್ಞಾನ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದರೆ ಭಾರತವು ಆಧ್ಯಾತ್ಮಿಕ ಕ್ಷೇತ್ರದಲ್ಲಿ




ಶ್ರೀ ಸುತ್ತೂರು ಜಗದ್ಗುರುಗಳವರಿಂದ ನುಡಿ ಗೌರವ



ಪ್ರಜಾಪ್ರಗತಿ ಸಂಪಾದಕರಾದ ಶ್ರೀ ಎಸ್. ನಾಗಣ್ಣ ಅವರಿಂದ ಪ್ರಸ್ತಾವಿಕ ನುಡಿ

ಪ್ರಸಿದ್ಧಿಯಾಗಿದೆ. ಸಿದ್ಧಗಂಗೆಯು ಭಾರತದ ದಕ್ಷಿಣಕಾಶಿ ಎಂದು ಪ್ರಖ್ಯಾತಿ ಹೊಂದಲು ಪೂಜ್ಯ ಶ್ರೀಗಳವರು ಪಾತ್ರ, ಶ್ರಮ, ಕಳಕಳಿ ಅಪಾರವಾಗಿದೆ. ಅವರಿರುವ ಕಾಲದಲ್ಲಿ ನಾವಿರುವುದು ನಾವೇ ಧನ್ಯರು ಎಂದು ನುಡಿದರು.

ಕಾರ್ಯಕ್ರಮ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಶ್ರೀ ಧನಿಯಾಕುಮಾರ ಸ್ವಾಗತಿಸಿದರು. ಶ್ರೀ ಆರಾಧ್ಯ ಅವರು ಶರಣು ಸಮರ್ಪಣೆ ಮಾಡಿದರು. ಡಾ. ಶಾಲಿನಿ ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀಮಠದ ಸತ್‌ಸಂಪ್ರದಾಯದಂತೆ ಎಲ್ಲರಿಗೂ ಪ್ರಸಾದ ವ್ಯವಸ್ಥೆ ಮಾಡಲಾಗಿತ್ತು.

**ಶಿವಕುಮಾರಶ್ರೀ ರಸ್ತೆ :**

ತುಮಕೂರು ನಗರದ ಬಿ.ಎಚ್. ರಸ್ತೆಗೆ ಶಿವಕುಮಾರಶ್ರೀ ರಸ್ತೆ ಎಂದು ಹೆಸರಿಟ್ಟಿದ್ದು ಬಟವಾಡಿ ಬಳಿ ಹೊಸ ನಾಮಫಲಕವನ್ನು ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಏಪ್ರಿಲ್ ೧ ರಂದು ಅನಾವರಣ ಗೊಳಿಸಿದರು. ಬಟವಾಡಿಯಿಂದ ಗುಬ್ಬಿ ಗೇಟ್‌ವರೆಗಿನ ಬಿ.ಎಚ್. ರಸ್ತೆಗೆ ಶಿವಕುಮಾರಶ್ರೀ ಎಂದು ಹೆಸರಿಡಲು ಸರ್ಕಾರ ಅನುಮೋದನೆ ನೀಡಿದೆ. ಪೂಜ್ಯ ಶ್ರೀಗಳಿಗೆ ೧೧೦ನೇ ಹುಟ್ಟುಹಬ್ಬದ ಶುಭ ಸಂದರ್ಭದಲ್ಲಿ ತುಮಕೂರು ಮಹಾನಗರ ಪಾಲಿಕೆ ಪೂಜ್ಯ ಶ್ರೀಗಳವರ ಹೆಸರನ್ನು ಬಿ.ಎಚ್. ರಸ್ತೆಗೆ ನಾಮಕರಣ ಮಾಡುವುದರ ಮೂಲಕ ಗೌರವ ಸಲ್ಲಿಸಿದೆ. ನಾಮಫಲಕದ ಅನಾವರಣ ಶುಭ ಸಂದರ್ಭದಲ್ಲಿ ಮೇಯರ್ ಶ್ರೀ ರವಿಕುಮಾರ್, ಶಾಸಕ ಶ್ರೀ ಎಸ್. ರಫೀಕ್ ಅಹ್ಮದ್, ಪಾಲಿಕೆ ಸದಸ್ಯ ಶ್ರೀ ರಾಜಣ್ಣ, ಶ್ರೀ ನರಸೇಗೌಡ, ಶ್ರೀ ರುದ್ರೇಶ್ ಮೊದಲಾದವರು ಉಪಸ್ಥಿತರಿದ್ದರು.



ಕಿಕ್ಕಿರಿದ ಭಕ್ತರು, ಅಭಿಮಾನಿಗಳು







ಬೈಕ್ ರ್‍ಯಾಲಿಯ ಮೂಲಕ ಪೂಜ್ಯ ಶ್ರೀ ಶ್ರೀಗಳವರನ್ನು ವೇದಿಕೆ ಬರಮಾಡಿಕೊಳ್ಳುತ್ತಿರುವುದು.

**ಶೋಭಾಯಾತ್ರೆ :**

ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನಾಧಾರಿತ ಸಂದೇಶ ಸಾರಲು ಮಾರ್ಚ್ ೧ ರಂದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಆರಂಭವಾದ ಶೋಭಾಯಾತ್ರೆ ತುಮಕೂರು, ಹಾಸನ,



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನಾಧಾರಿತ ಸಂದೇಶ ಸಾರುವ ರಥದ ಒಂದು ನೋಟ

ಚಿಕ್ಕಮಗಳೂರು, ಕೊಡಗು, ಚಾಮರಾಜನಗರ, ಮೈಸೂರು, ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ ಹಾಗೂ ಕೋಲಾರ ಜಿಲ್ಲೆಗಳಲ್ಲಿ ಸಂಚರಿಸಿ ಏಪ್ರಿಲ್ ೧ ರಂದು ತುಮಕೂರು ನಗರವನ್ನು ಪ್ರವೇಶಿಸಿತು. ಲಕ್ಷಾಂತರ ಜನ ಭಕ್ತರು ಶೋಭಾ ರಥವನ್ನು ಭಕ್ತಿಯಿಂದ ಬರಮಾಡಿಕೊಂಡು ಧನ್ಯತೆಯನ್ನು ಪಡೆದರು. ಮೆರವಣಿಗೆಯಲ್ಲಿ ವೀರಗಾಸೆ, ನಂದಿಧ್ವಜವೂ ಸೇರಿದಂತೆ ವಿವಿಧ ಜನಪದ ಕಲಾ ತಂಡಗಳು ಭಾಗವಹಿಸಿ ಶೋಭಾ ಯಾತ್ರೆಗೆ ಶೋಭೆಯನ್ನು ತಂದುಕೊಟ್ಟವು.

## ಭುವನದ ಬೆಳಕು



ಶಿವನ ಕರುಣದಿ ಉದಿಸಿದ ಕಾರುಣ್ಯಮೂರ್ತಿ
ಜಗದ ಜಂಗಮರ ಮಹಾಜ್ಯೋತಿ
ಬಡವ–ದಲಿತರ ಬಾಳಿನ ಭಾಗ್ಯಜ್ಯೋತಿ
ಸಾಧನೆ ಶಿಖರವೇರಿದ ಸಾಕಾರಮೂರ್ತಿ

ನಿಮಗೆ ಬೇಕಿಲ್ಲ ಪವಾಡಗಳ ಲೋಕ
ಗದ್ದುಗೆ ಕಿರೀಟ ಗೊಡವೆಗಳಿಂದ ದೂರ
ಸರಳತೆ ಸಂಸ್ಕೃತಿ ಕಾಯಕದ ಮೇರು ಶಿಖರ
ಎನಿತು ಬೆರಗಾಗಿ ನೋಡುತಿಹುದು ಲೋಕ

ನೀವು ಅಪಾರ ಭಕ್ತರಿಗೆ ಪರಮಪೂಜ್ಯ
ಕನ್ನಡ ಕಸ್ತೂರಿ ಕರ್ನಾಟಕ ರತ್ನ
ಭಾರತದ ಭುವಿಗೆ ಪದ್ಮಭೂಷಣ
ಜನಮಾನಸದ ಹೃದಯದಲ್ಲಿ ಭಾರತರತ್ನ

ನೂರೊಂಭತ್ತು ವಸಂತಗಳ ಬೇವು ಬೆಲ್ಲ
ಬೇವುಂಡು ಅಮೃತನೀವ ಜೀವ
ನಡೆದಾಡೋ ದೈವ ಸಿದ್ಧಗಂಗೆಯ ಸಿರಿ
ದಾಸೋಹ ಕಾಯಕದ ದಿವ್ಯ ಜೀವ

ಜಗಕೆ ಶಾಂತಿ ಸಾರಿದ ಬುದ್ಧನ ರೂಪ
ಅಹಿಂಸೆಯ ಮೂರ್ತಿ ಏಸುವಿನ ದೀಪ
ಪರಮ ಪಾವನ ಫಕೀರನ ವೇಷ
ಪರಮಹಂಸರ ಮಾರ್ಗದ ದಾರಿದೀಪ
ಜಗಕೆ ಬೆಳಕು ನೀಡುವ ಬಸವನ ರೂಪ

– ಬಿ.ಆರ್. ರಾಜಶೇಖರ್
ಮುಖ್ಯ ಶಿಕ್ಷಕರು
ಶ್ರೀ ಸಿದ್ಧಗಂಗಾ ಪ್ರೌಢಶಾಲೆ, ಜಂಗಮಮಠ
ಶಿವನಗರ, ಬೆಂಗಳೂರು–೧೦



# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

– ಡಾ. ಎಂ.ಜಿ. ನಾಗರಾಜ್ *

*(ಮಾರ್ಚ್ ಸಂಚಿಕೆಯಿಂದ)*

## ಶ್ರೀ ಗೋಸಲ ಸಿದ್ದೇಶ್ವರರು ಬೆಳಗಿದ ಕ್ಷೇತ್ರಗಳು :

ಹೊಯ್ಸಳ ರಾಜಗುರು ವಂಶಿಕರಾಗಿ ಸೊಗಲಕ್ಷೇತ್ರ, ಹರದನಹಳ್ಳಿ, ಸಿದ್ಧಗಂಗಾ (ಕೇತಶರಧಿ–ಕೇತಸಾಗರ, ಕಾತ್ಸಂದ್ರದ ಧರ್ಮೋಸಾಂಸ್ಕೃತಿಕ ಕೇಂದ್ರ) ಕ್ಷೇತ್ರಗಳನ್ನು ಕಾರ್ಯಕ್ಷೇತ್ರಗಳನ್ನಾಗಿ ಮಾಡಿಕೊಂಡು ಅವುಗಳನ್ನು ಬೆಳಗಿಸಿದವರು, ಶ್ರೀ ಗೋಸಲ ಸಿದ್ಧೇಶ್ವರರು. ಸೊಗಲಕ್ಷೇತ್ರ ಅವರ ಅಂತೇವಾಸಿ ನೆಲೆ; ಗುರುವಾಗಿ ದೀಕ್ಷಿತರಾದ ನೆಲೆ, ಜನಸಾಮಾನ್ಯರ ಹಿತೈಷಿಯಾಗಿ ಹರದನಹಳ್ಳಿಯ ಮಠಸ್ಥಾಪನೆ–ವಾಣಿಜ್ಯಪುರಿ ಮಠಾಧಿಪತ್ಯ ಮಾಡಿದ ನೆಲೆ; ಸಿದ್ಧಗಂಗೆಯು ಗಂಗಾವತರಣವನ್ನು ಶಿಷ್ಯವೃಂದಕ್ಕೆ ತೀರ್ಥಗಂಗೆಯಾಗಿಸಿ, ಕಾರಣಪುರುಷರಾಗಿ ಶಿವಧರ್ಮವನ್ನು ಬೆಳಗಿದ ನೆಲೆ. ಅವರ ಸಂಚಾರತಾಣಗಳಲ್ಲಿ ತುಳುವದೇಶ, ಸಿಂಗ್ರೀಹಳ್ಳಿ, ಶಿವಗಂಗಾಕ್ಷೇತ್ರಗಳೂ ಸೇರಿದಂತಿವೆ.



ಶ್ರೀ ಗೋಸಲ ಸಿದ್ಧೇಶ್ವರರು

'ಗೋಸಲ' ಶಬ್ದವನ್ನು 'ಕೋಸಲ' ದೇಶಕ್ಕೆ ಅನ್ವಯವೆಂದಿರಲಿ; 'ಗೋಸಲ' ಶಬ್ದವರ್ಣ ಪಲ್ಲಟದಿಂದ ಸುಗೋಲ > ಸೊಗಲ, ಸುಗೋಲಾಶ್ರಮ' ಎಂಬ ನಿಷ್ಪತ್ತಿ ಅನುಸರಣವಿರಲಿ, ಕೋಸಲದ ರಾಜಧಾನಿ ಶ್ರಾವಸ್ತಿ > ಸಾವತ್ಥಿ > ಸವದತ್ತಿ ಎಂಬ ನಿಷ್ಪತ್ತಿ ಇರಲಿ, ಗೋಸಲ ಎಂದರೆ 'ಜಟೆ' ಎಂಬ ಅರ್ಥವನ್ನು ಪರಿಗ್ರಹಿಸಿರಲಿ[1] ಇವಕ್ಕೂ ಪೋಷಕವಾದ ಗೋಸಲಸಿದ್ದೇಶ್ವರರ ಕುರಿತ ಬಾಯ್ದೆರೆ ಸಂಗತಿಗಳು, ಐತಿಹ್ಯ ಹಾಗೂ ಇತಿಹಾಸದ ಸ್ಪರ್ಶವಿರುವ ಸಂದರ್ಭಗಳು ಗಮನಕ್ಕೆ ಬರುತ್ತವೆ.





ಸೋಗಲ ಕ್ಷೇತ್ರದ ಬೃಹತ್ ಶಿಲಾಯುಗದ ಕಲ್ಲಾಸರೆಯ ಒಂದು ನೋಟ. ಜನಪದರು 'ಪಾರ್ವತಿ' ಸಂಬಂಧವನ್ನು ಹೊಂದಿಸಿಕೊಂಡಿದ್ದಾರೆ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸೊಗಲ, ಮುರುಗೋಡು, ತಲ್ಲೂರು, ಮುನವಳ್ಳಿ, ಇವು ನೆರೆಹೊರೆಯ ಶಿವಮುನಿಗಳ ಸಂಚಾರಿ ಕ್ಷೇತ್ರಗಳೆಂದು ಜನತೆಯಲ್ಲಿ ಧರ್ಮೋಸಾಂಸ್ಕೃತಿಕ ಮಹತ್ವ ಪಡೆದಿವೆ. ಇಲ್ಲಿನ ಪರಿಸರವೆಲ್ಲ ಮನಮೋಹಕ. ಪರಿಸರಪ್ರೇಮಿಗಳಿಗೆ ರೋಚಕ. ಸೊಗಲ

1. ಪ್ರೊ. ಸಿ. ಮಹದೇವಪ್ಪ, 'ಗೋಸಲ, ಗೋಸಲ ಸಿದ್ದೇಶ್ವರರು–ಒಂದು ಅಧ್ಯಯನ' ದಾಸೋಹಶ್ರೀ, ೧೯೯೭, (ಪ್ರಸಂ.) ಪಂ. ಚನ್ನಪ್ಪ ಎರೆಸೀಮೆ, ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾಕ್ಷೇತ್ರ, ಪು.೧೯೬, ೨೧೫–೧೬.

* ನಂ. ೨೨೧, 'ಅನರ್ಘ್ಯ', ಶ್ರೀ ಜ.ಚ.ನಿ. ಕೃಪೆ' ೬ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–೫೬೦೦೧೦







ಸೋಗಲ ಕ್ಷೇತ್ರದ ಹಾದಿಯ ಬಂಡೆಗಲ್ಲುಗಳು

ಕ್ಷೇತ್ರವು ಪ್ರಾಗೈತಿಹಾಸಿಕ ನೈಸರ್ಗಿಕ 'ಕಲ್ಲಾಸರೆ'ಯನ್ನು ಹೊಂದಿ, ಆ ಕಲ್ಲಾಸರೆಗೆ 'ಪಾರ್ವತಿ' ಕತೆಯ ಪೌರಾಣಿಕ ಸಂಬಂಧವನ್ನು ಜನಪದ ಪರಿಭಾವಿಸಿದೆ. ಇಲ್ಲಿ ಸೋಮೇಶ್ವರ ಲಿಂಗ, ಸಪ್ತಮಾತೃಕೆಯರ ಶಿಲ್ಪ ಹಾಗೂ ವೀರಭದ್ರ ದೇಗುಲವಿದೆ. ಈ ಪರಿಸರದ ನೈಸರ್ಗಿಕ ವೈಶಿಷ್ಟ್ಯವಾಗಿ, ಬಂಡೆಗಳ ಸ್ವರೂಪವೂ ಬನಶಂಕರಿ ಬಾದಾಮಿಯ ಬಂಡೆಗಳ ಕಲಾತ್ಮಕ ಪೋಣಿಕೆಯಂತೆಯೆ ಇದ್ದು ನಿಸರ್ಗ ಮೋಹಕ ದೃಶ್ಯವನ್ನು ದೇಗುಲಕ್ಕೆ ಮೆಟ್ಟಿಲು ಹತ್ತಿಹೋಗುವ ಯಾರೆಲ್ಲರಿಗೂ ತುಂಬ ಚೆಲುವಾಗಿ ನೀಡುವಂತಿದೆ. ಈ ಸೊಗಲವು ಸುಗೋಲಾಶ್ರಮವೆನಿಸುವಂತೆ ಮುನಿಗಳ ವಾಸ್ತವ್ಯವೂ ಇದ್ದ ಬಗ್ಗೆ ತಿಳಿದು ಬರುತ್ತದೆ. ಇಂಥ ಪರಿಸರದಲ್ಲಿ ಗೋಸಲಾರ್ಯಯತಿ ಅಂತೇವಾಸಿಯಾಗಿದ್ದುದು, ನಂತರ ಪಟ್ಟ ಪಡೆದುದು ಅವರ ಮಾನಸ ಅನುಭೂತಿಗೆ ತಕ್ಕುದಾಗಿತ್ತೆನಿಸುತ್ತದೆ.



ಮುನವಳ್ಳಿಯ ಪಂಚಲಿಂಗೇಶ್ವರ ದೇಗುಲದ ಕದಂಬ ನಾಗರ ಶೈಲಿಯ ಗೋಪುರದ ಸುಖನಾಸಿಯಲ್ಲಿ ಸಿಂಹ, ವೀರ, ಕೀರ್ತಿಮುಖ ಶಿಲ್ಪಗಳು

ಮುನವಳ್ಳಿಯ ಮೂಲ ಹೆಸರು ಮುನಿಪಲ್ಲಿ (ಮುನಿಹಳ್ಳಿ). ಮುನವಳ್ಳಿ < ಮುನಿಹಳ್ಳಿ < ಮುನಿಪಲ್ಲಿಯು ಐತಿಹ್ಯದಲ್ಲಿ ಅಗಸ್ತ್ಯ ಮುನಿಗೂ ಸಂಬಂಧ ಗೊಂಡ ಕ್ಷೇತ್ರವೆನಿಸಿದೆ. ಅಂತಾಗಿ ಅಲ್ಲಿಯ ಪಂಚ ಲಿಂಗೇಶ್ವರ ದೇಗುಲದಲ್ಲಿ ಸಾಲಾಗಿ ಐದು ಲಿಂಗಗಳ ಜೋಡಣೆ ಇದ್ದು, ಅವು ಬಾಣಭಾಗ'ದಂತೆ' (ರುದ್ರಭಾಗ), ಲಿಂಗ ಸ್ವರೂಪದಲ್ಲಿವೆ. ಹಿಂಬದಿಯಲ್ಲಿ ಎಂಟು ಜಡೆ(ಜಟೆ) ಸುರುಳಿಯು 'ಹ'ಕಾರ ಆಕಾರದ ಜಟೆಯನ್ನು ಶಿರದ ನೆತ್ತಿಯಲ್ಲಿ ಹೊಂದಿ ಶಿವಯೋಗ ಭಂಗಿಯ ಆಸೀನ ಶಿಲ್ಪವನ್ನು ಅಗಸ್ತ್ಯಮುನಿ ಎನ್ನುತ್ತಾರೆ. ಪ್ರಾಕಾರದಲ್ಲಿ 'ಮೂರಾಲಿಂಗೇಶ್ವರ' ಸೇರಿದಂತೆ ಐದು ಪೂರ್ಣ ಶಿವಲಿಂಗಗಳ ಗುಡಿಗಳಿವೆ. 'ನಿರ್ವಿಕಲ್ಪ ಶ್ರೀಮದ್'ಜಗದ್ಗುರು ರುದ್ರಮುನೀಶ್ವರ ಶಿವಯೋಗಿಗಳ ಗದ್ದುಗೆ' ಎಂಬ ಶೀರ್ಷಿಕೆಯಲ್ಲಿ ತೋರುಗದ್ದುಗೆ ಗುಡಿ ಇದೆ. ಪಂಚಲಿಂಗೇಶ್ವರ ಲಿಂಗಗಳ ಮೂಲಸಂಕೇತಗಳಾದ ಹಳೆಯ ಏಕಪಾಣಿವಟ್ಟದ ಮೇಲಿನ ಐದು ಲಿಂಗರೂಪಗಳನ್ನು, ಹಳೆಯ ನಂದಿಶಿಲ್ಪವನ್ನು ಆವರಣದ ವೃಕ್ಷದ ಮುಂದಿನ ವೇದಿಕೆಯಲ್ಲಿ ಇಡಲಾಗಿದೆ.



ಮುನವಳ್ಳಿಯ ಪಂಚಲಿಂಗೇಶ್ವರ ದೇಗುಲದ ಕಲ್ಯಾಣ ಚಾಲುಕ್ಯ ಶೈಲಿಯ ಮುಖಮಂಟಪ ಮತ್ತು ಜ್ಯೋತಿಸ್ತಂಭ



ಮುನವಳ್ಳಿಯ ಪಂಚಲಿಂಗೇಶ್ವರ ದೇಗುಲದಲ್ಲಿರುವ ಲಿಂಗಗಳ ಸಾಲು

ಆದರೆ ದೇಗುಲದ ಗರ್ಭಗೃಹದಲ್ಲಿ ಆದಿಶಕ್ತಿದೇವತೆಯದೆನ್ನಲಾದ (ನಾಗಹೆಡೆಯ ಜೊತೆಗೆ) ವಿಗ್ರಹವನ್ನು, ಪಂಚಲಿಂಗಗಳಲ್ಲಿ ನಡುವಣ ಲಿಂಗದ ಶಿರದ ಮೇಲೆ ಇಡಲಾಗಿದೆ. ಕಲ್ಯಾಣ ಚಾಲುಕ್ಯರ ಶೈಲಿಯ ಕಡಚಲು ಉಳ್ಳ ಸ್ತಂಭಗಳು ಮೂರಲಿಂಗೇಶ್ವರ ದೇಗುಲದಲ್ಲಿವೆ. ಪಂಚಲಿಂಗೇಶ್ವರ ದೇಗುಲದಲ್ಲಿ ಕಕ್ಷಾಸನ ಸಹಿತವಾಗಿ, ಕಲ್ಯಾಣ ಚಾಲುಕ್ಯ ಶೈಲಿ ಸ್ತಂಭಗಳು ಕದಂಬನಾಗರ ಶೈಲಿಯ


ಪಂಚಲಿಂಗೇಶ್ವರ ದೇಗುಲದ ಅಗಸ್ತ್ಯ ಮುನಿ ಯೋಗ ಭಂಗಿ


ಮುನವಳ್ಳಿ ಪಂಚಲಿಂಗೇಶ್ವರ ದೇಗುಲ ಪ್ರಾಕಾರದಲ್ಲಿ ರುದ್ರಮುನೀಶ್ವರ ಗದ್ದುಗೆ


ಮುನವಳ್ಳಿಯ ಪಂಚಲಿಂಗೇಶ್ವರ ದೇಗುಲದಲ್ಲಿರುವ ಮೂಲ ಲಿಂಗ ರೂಪಗಳು.

ವಿಮಾನಗೋಪುರಗಳು, ಆ ಗೋಪುರದ ಕೀರ್ತಿಮುಖದ ಸಹಿತವಾದ ಮೇಲ್ ಸುಖನಾಸಿ ಭಾಗದಲ್ಲಿ ಸಿಂಹ ಹಾಗೂ ಅದರ ಇಬ್ಬದಿಯಲ್ಲಿ ವೀರಮಂಡಿಯ ಭಂಗಿಯಲ್ಲಿರುವ ವೀರ ವಿಗ್ರಹಗಳು ಇತ್ಯಾದಿಗಳನ್ನು ಹೊಂದಿದ್ದು, ಹೊಯ್ಸಳರ ಕಾಲದವರೆಗೂ ಈ ದೇಗುಲವು ಜೀರ್ಣೋದ್ಧಾರಗೊಂಡ ಸೂಚನೆ ನೀಡುತ್ತವೆ. ಭೈರವ ಹಾಗೂ ಭೈರವಿಯ ಶಿಲ್ಪಗಳಿದ್ದು, ಶಾಕ್ತಕ್ಷೇತ್ರವೂ ಆಗಿದ್ದುದರ ಸೂಚನೆ ನೀಡುತ್ತವೆ. ಸಾಲು ಪಂಚಲಿಂಗಗಳ ಒಂದು ಮಾದರಿ ಇಲ್ಲಿದೆ. ಇದಲ್ಲದೆ ಶಿವನ ಪಂಚಮುಖಗಳೆಂಬಂತೆ ಲಿಂಗ ಶರೀರದ ಐದುಮುಖಗಳಾಗಿ ಶಿಲ್ಪಿಸಿರುವ ಮಾದರಿಗಳೂ ಇವೆ. ಪ್ರತ್ಯೇಕ ಪೂರ್ಣ ಶಿವಲಿಂಗಗಳ ಪಂಚೈದು ಲಿಂಗಗುಡಿಗಳನ್ನು ದೇಗುಲ ಪ್ರಾಕಾರದಲ್ಲಿ ಹಾಗೂ ಹೊರಗೆ ನಾಲ್ಕು ದಿಕ್ಕುಗಳಲ್ಲಿ ವ್ಯವಸ್ಥೆಗೊಳಿಸಿರುವ ಮಾದರಿಯೂ ಉಂಟು. ಆದರೆ 'ಮುನಿವಳ್ಳಿ'ಯಲ್ಲಿ ಲಿಂಗಗಳನ್ನು ಶಿವ ಪಂಚವಕ್ತ್ರಗಳ ಪ್ರತೀಕವಾಗಿ ಸಾಲಾಗಿ ಜೋಡಿಸಿರುವ ವ್ಯವಸ್ಥೆ ಇದೆ. ಪ್ರತ್ಯೇಕ ದಿಶಾಲಿಂಗಗಳೂ ಇವೆ. ಸಿದ್ದಗಂಗೆಗೆ ಸುದೂರದ ಸಿಂಗ್ರಿಹಳ್ಳಿಯಲ್ಲಿ ಪಂಚಲಿಂಗಗಳನ್ನು ಅಡುಗೆ ಒಲೆಸ್ವರೂಪದಲ್ಲಿ ತಾಣಗೊಳಿಸಿ ಪ್ರತಿಷ್ಠಾಪಿಸಲಾಗಿದೆ.

ಹಾವೇರಿ ಜಿಲ್ಲೆ ಸವಣೂರು ತಾಲೂಕು ಕಾರಡಗಿ


ಮೂರಲಿಂಗೇಶ್ವರ ದೇವಸ್ಥಾನದ ಸ್ತಂಭಶೈಲಿ

ವೀರಭದ್ರ ದೇಗುಲದ ಬದಿಗೆ ಇದ್ದ ಕಲ್ಯಾಣ ಚಾಲುಕ್ಯ ಶೈಲಿಯ ದೇಗುಲದಲ್ಲಿ, ದಿಶಾಲಿಂಗಗಳಾಗಿ ಇದ್ದ ಪಂಚಲಿಂಗಗಳ ಪೈಕಿ ಇಂದು ತ್ರಿಲಿಂಗೇಶ್ವರ, ಪಂಚಲಿಂಗೇಶ್ವರ, ಡೊಳ್ಳೇಶ್ವರ ಲಿಂಗಗಳು ಮಾತ್ರ ಕಾಣಸಿಗುತ್ತವೆ. ಕ್ರಿಪೂ.೩ನೆಯ ಶತಮಾನದ ನಾರಾಯಣೀ ಉಪನಿಷತ್ತಿನಲ್ಲಿ ಶಿವಲಿಂಗಕ್ಕೆ ಪಂಚವಕ್ತ್ರಗಳ ಆರೋಪವಿದೆ. ಈ ಪಂಚಮುಖಗಳು ಶಿವನಲ್ಲಿಯ ವಿಶ್ವದ ಐದು ಮೂಲತತ್ತ್ವಗಳನ್ನು (ಪೃಥ್ವಿ, ಅಪ್ಪು, ತೇಜಸ್ಸು (ಅಗ್ನಿ), ವಾಯು, ಆಕಾಶ) ಸಂಕೇತಿಸುತ್ತವೆ ಎನ್ನುವುದುಂಟು.

ಇಂಥ ಅಧ್ಯಾತ್ಮಿಕ ಪರಿಸರವನ್ನು ಹೊಂದಿದ್ದ ಸೊಗಲ, ಮುನವಳ್ಳಿ, ತಲ್ಲೂರು, ಮುರಗೋಡು, ಕೂಡಿದಂಥ 'ಸೊಗಲ ಕ್ಷೇತ್ರ'ದಲ್ಲಿ ಅಂದರೆ ಮುನಿಪಲ್ಲಿಯ ಪಂಚಲಿಂಗೇಶ್ವರ ದೇಗುಲದಲ್ಲಿ 'ಶೂನ್ಯ ಸಿಂಹಾಸನ'ದ ೧೪ನೆಯ ಪಟ್ಟದ ಚೆನ್ನವೀರಸ್ವಾಮಿಗಳಿಂದ ಗೋಸಲ ದೇವರು ಶಿವಾನುಭವ[2] ಚರಂತಿಕೆ ಪಟ್ಟವನ್ನು ಪಡೆದು ದೇಶಸಂಚಾರಕ್ಕೆ ಹೊರಟರಂತೆ ಅಂತಾಗಿ ಮುನವಳ್ಳಿಗೆ ವಿಶೇಷ ಮಹತ್ವವಿದೆ.






ಕಾರಿಮನಿ ಮಡಿವಾಳ ಮಾಚಯ್ಯನ ಗದ್ದುಗೆ


ಕಾರಿಮನಿ ಮಡಿವಾಳ ಮಾಚಯ್ಯ ಗದ್ದುಗೆ ಕಟ್ಟಡ

ಇನ್ನು ಮುರುಗೋಡು ಪರಿಸರವು ಮೂರು ಕೋಡುಗಳಂತೆ ಕಾಣುವ ನೈಸರ್ಗಿಕ ಗುಡ್ಡಗಳನ್ನು ಹೊಂದಿರುವ ತಾಣ. ಇಲ್ಲಿ ಗವಿ ಸಿದ್ದೇಶ್ವರರ ಗದ್ದುಗೆ ಇದೆ. ಮೂರು ಕೋಡುಗಳ ಕಾರಣ 'ತ್ರಿಶೃಂಗಿಪ್ಪುರ'ವೆಂದು ಸಂಸ್ಕೃತಾನುಕರಣ ಮಾಡಿ ಹೇಳುವುದುಂಟು[2ಅ]. ತ್ರಿಶೃಂಗಿ ಋಷಿಯ ಉಪಾಸನಾ ಕ್ಷೇತ್ರವಾಗಿತ್ತೆಂದು ಜನರಾಡಿಕೆಯಲ್ಲಿದೆ. ಗಮನಾರ್ಹವಾಗಿ ಈ ಊರು ಶರಣರು ಕಲ್ಯಾಣ ಕ್ರಾಂತಿಯ ನಂತರ ಚದುರಿ ಬಂದು, ಅಡಗಿದ ತಾಣವಂತೆ. ಪೋಷಕವಾಗಿ ಗವಿಗಳೂ ಇಲ್ಲಿವೆ. ಅಲ್ಲದೆ ಮುನಿವಳ್ಳಿ ಮತ್ತು ಮುರಗೋಡು ನಡುವೆ ಕಾರಿಮನಿ ಗ್ರಾಮದಲ್ಲಿ ಮೂರು ಗದ್ದುಗೆಗಳ ಸಾಲಿನಲ್ಲಿ ನಡುವಿನದು **ಮಡಿವಾಳ ಮಾಚಯ್ಯನ ಗದ್ದುಗೆ** ಇದ್ದು ಆ ಭಾಗಕ್ಕೆ ಮಾತ್ರ ಗೋಡೆ ಹಾಕಿದ್ದಾರೆ. ಉಳಿದ ಗದ್ದುಗೆ ಭಾಗಗಳಿಗೆ ತೆರೆದ ಭಾಗವಿದೆ. ಮಡಿವಾಳ ಮಾಚಯ್ಯನು ಗೊಡಚಿಯಲ್ಲಿ ಬಿಜ್ಜಳನ ಸೈನ್ಯವನ್ನು ಎದುರಿಸಿ, ನಂತರ ಉಳವಿಗೆ ಹೋಗುವಲ್ಲಿ, ಶರಣರನ್ನು ಕರೆದುಕೊಂಡು ಕಾರಿಮನಿಗೆ ಬಂದನಂತೆ. ಅವರು ಅಡಗಿರುವ ಜಾಗ ಬಿಜ್ಜಳನ ಸೈನ್ಯಕ್ಕೆ ತಿಳಿಯಬಾರದೆಂದು, ಇಂಥ ಗೋಡೆ


ಮಡಿವಾಳ ಮಾಚಯ್ಯನ ಗದ್ದುಗೆಯ ಮೇಲಿನ ಪತ್ರೆದಳ

ಹಾಕಿದ್ದ ಸಂಕೇತವಾಗಿ ಸ್ಮರಣ ಗದ್ದುಗೆ ಎಂದರೂ ಅದು ಮಡಿವಾಳ ಮಾಚಯ್ಯನ ಲಿಂಗೈಕ್ಯ ನೆಲೆ ಎಂದೂ ಗ್ರಾಮೀಣರು ಶರಣಾಚರಣೆಯನ್ನು ನಡೆಸಿಕೊಂಡು ಬಂದಿದ್ದಾರೆ. ಸಿಂಧಗಿ ತಾಲೂಕಿನ ದೇವರ ಹಿಪ್ಪರಗಿ ಅವನ ಹುಟ್ಟೂರು, ಅಲ್ಲಿಯೂ ಮಡಿವಾಳ ಮಾಚಯ್ಯನ ಗದ್ದುಗೆ ಇದ್ದರೂ ಸಾಂದರ್ಭಿಕ ಇತಿಹಾಸವನ್ನು ಗಮನಿಸಿದರೆ ಅದು ತೋರುಗದ್ದುಗೆಯ ನೆಲೆ ಎನ್ನಬೇಕಾಗುತ್ತದೆ. ಈ ಹಿನ್ನೆಲೆಗಳಲ್ಲಿ ಗೋಸಲಾರ್ಯ ಯತಿಗಳು ಋಷಿಮುನಿ ಶರಣಕ್ಷೇತ್ರದಲ್ಲಿ ಚರಂತಿಕೆ ಪಟ್ಟ ಪಡೆದು ಹೊಯ್ಸಳರ ಕಾಲದಲ್ಲಿ ಶಿವಾಚಾರ ಪ್ರಸಾರಕ್ಕಾಗಿ ಕರ್ನಾಟಕದ ದಕ್ಷಿಣ ಭಾಗದತ್ತ ಹೊರಟಂತಿದೆ. ಜೊತೆಗೆ ವಿಜಯನಗರ ಸಾಮ್ರಾಜ್ಯದ ಉದಯದ ಸಂದರ್ಭವೂ ಕೂಡಿಬರಲಾಗಿ, ಸಾಂಸ್ಕೃತಿಕ ಐಕಮತ್ಯ ಸಾಧನೆಗಾಗಿ ಸಂಚಾರ ಕೈಗೊಂಡಿರುವುದು, ಶಾಸನದಲ್ಲಿ ಸೂಚಿತ ಅವರ ಮಣಿಹಗಳಿಂದ ವಿದಿತವಾಗುತ್ತದೆ. ಹರದನಹಳ್ಳಿಯತ್ತ ಅವರು ಸಾಗಿದರು ಎಂದರೆ ಆ ಹೊತ್ತಿಗೆ ತಮ್ಮ 'ಅಂತೇವಾಸಿ' ಅವಧಿ ಮುಗಿಸಿ ಶಿವಾನುಭವ ಚರಂತಿಕೆಪಟ್ಟ ಪಡೆದವರಾಗಿ ಬಹುಶಃ ಅವರ ತೀರ್ಥರೂಪರಾದ ರಾಜಗುರು ಅಪ್ಪಣಾರ್ಯರು ಇದ್ದ ನೆಲೆಯಾಗಿ ಹಾಗೂ, ಹೊಯ್ಸಳ ರಾಜರ ಕ್ಷೇಮವನ್ನು ಹಾರೈಸಿ ಅತ್ತ ಸಾಗಿದ ಕಾರಣವೂ, ಇರಬಹುದು.

ಇನ್ನು ಮುನವಳ್ಳಿಯ ಪಂಚಲಿಂಗೇಶ್ವರ ದೇಗುಲದಲ್ಲಿ **ಅಗಸ್ತ್ಯ**ಮುನಿಯ ಯೋಗಾನುಷ್ಠಾನ ಮೂರ್ತಿಯ ಪ್ರತಿಷ್ಠೆ ಇರುವುದೂ ಗಮನಾರ್ಹ. ಕೇರಳದ ಗ್ರಂಥಗಳು ಅಗಸ್ತ್ಯನು ಕ್ರಿ.ಪೂ.೧೦೭೫ರಲ್ಲಿಯೆ ೧೮ ವೆಲೀರರ ಕುಟುಂಬಗಳನ್ನು ಕುರುಬರ ಮೂಲವಂಶಿಕರಾದ ಅರುವಲರ್ ಬುಡಕಟ್ಟಿನವರನ್ನೂ ಕರೆದುಕೊಂಡು ಪಶ್ಚಿಮಘಟ್ಟಗಳ ಕಡೆಗೆ ಬಂದು ಕಾಡುಗಳ ನಡುವೆ ನೆಲೆಗಳನ್ನು ರೂಪಿಸಿದ ಎಂದಿವೆ[3].

2. ಅದೇ., ಪು.೨೧೩.
2ಅ. ಭಾಷಾವಿಜ್ಞಾನಿ ಡಾ. ಸಂಗಮೇಶ ಸವದತ್ತಿಮಠ ಈ ಮಾಹಿತಿಯನ್ನು ತಿಳಿಸಿದರು.
3. K. Mammen, **Kerala Culture**, 1942, pp.80-81

# ವೈರಾಗ್ಯಮೂರ್ತಿ ಅಕ್ಕಮಹಾದೇವಿ

- ಯೋಗೀಶ್ ನಿರ್ವಿಕಲ್ಪ *

**ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ**
**ಆಯುಷ್ಯವೆಂಬ ರಾಶಿ ಅಳೆದು ತೀರದ ಮುನ್ನ**
**ಶಿವನ ನೆನೆಯಿರಿ ! ಶಿವನ ನೆನೆಯಿರಿ ! ಈ ಜನ್ಮ ಬಳಕಿಲ್ಲ**
**ಚೆನ್ನಮಲ್ಲಿಕಾರ್ಜುನ ದೇವರ ದೇವನ ನೆನೆದು**
**ಪಂಚಮಹಾಪಾತಕರೆಲ್ಲರು ಮುಕ್ತಿ ಪಡೆದರಂದು !**

'ಹಗಲು ರಾತ್ರಿಗಳೆಂಬ ಎರಡು ಕೊಳಗದ ಮೂಲಕ ಪ್ರಕೃತಿ ನಮ್ಮ ಬದುಕಿನ ಕ್ಷಣಗಳನ್ನು ಅಳೆಯುತ್ತಾ ಸಾಗುತ್ತಿದೆ. ಬದುಕಿನ ಕ್ಷಣಗಳು ಯಾವಾಗ ಮುಗಿದು, ಸಾವಿಗೆ ನಾವು ಒಳಗಾಗುತ್ತೇವೆಯೋ ಅದು ನಮಗೆ ತಿಳಿಯದು. ಜಗತ್ತಿನ ಪರಮಸತ್ಯವಾದ ಪರಮಾತ್ಮನ ತತ್ತ್ವ ರಹಸ್ಯ ನಮ್ಮೊಳಗೇ ಅಡಗಿದ್ದು, ಅದನ್ನು ಅರಿಯುವ ಪ್ರಯತ್ನ ಮಾಡಬೇಕು. ಬದುಕಿನ ಅಮೂಲ್ಯ ಕ್ಷಣಗಳು ಮುಗಿಯುವುದರೊಳಗೆ ಪರಮಸತ್ಯವನ್ನು ಕಂಡುಕೊಳ್ಳುವುದು ನಮ್ಮ ಬದುಕಿನ ಉದ್ದೇಶವಾಗಬೇಕು. ವೈರಾಗ್ಯ ಮತ್ತು ಶುದ್ಧಾಂತಃಕರಣದಿಂದ ಯಾರು ಪರಮ ಸತ್ಯವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾರೆಯೋ ಅವರೆಲ್ಲರಿಗೂ ಸತ್ಯ ಸಾಕ್ಷಾತ್ಕಾರದ ದರ್ಶನ ಸಾಧ್ಯವುಂಟು. ಪರಮ ಸತ್ಯವನ್ನು ಕಂಡುಕೊಳ್ಳುವುದೇ ನಮ್ಮ ಬದುಕಿನ ನಿಜ ಸಾರ್ಥಕತೆಯಾಗಿದೆ' ಎಂದು ಉಪದೇಶಿಸುವುದರ ಮೂಲಕ ಸಾರ್ಥಕತೆಯ ದಿಕ್ಸೂಚಿಯಾಗಿ ನಿಂತವರು ಜಗನ್ಮಾತೆ ಅಕ್ಕಮಹಾದೇವಿ ಯವರು. ಹುಟ್ಟು ಸಾವಿಲ್ಲದ, ಭವ-ಭಯವಿಲ್ಲದ ನಿರ್ಭಯ ಚೆಲುವನಾದ ಪರಮಾತ್ಮನನ್ನೇ ತನ್ನ ಪತಿ ಎಂದು ಭಾವಿಸಿದ ಅವರು ಆತನನ್ನು ನಿರ್ಮಲ ಮನಸ್ಸಿನಿಂದ ಆರಾಧಿಸುವುದರ ಮೂಲಕ ಪರಮಾತ್ಮನ ದಿವ್ಯ ಸಾಕ್ಷಾತ್ಕಾರ ಪಡೆದ ಜಗತ್ತಿನ ಶ್ರೇಷ್ಠ ಅನುಭಾವಿ. ಸ್ತ್ರೀ ಎಂದರೆ ಅದೊಂದು ಶಕ್ತಿ ಎಂದು ನಿರೂಪಿಸಿದ ವೈರಾಗ್ಯ ಮಾತ್ರ ಸಂಕಲ್ಪ ಶಕ್ತಿಯ ಸಾಕಾರ ರೂಪದಂತಿರುವ ಅವರು ಸ್ತ್ರೀ ಸಮುದಾಯಕ್ಕೆ ಸದಾ ಸ್ಫೂರ್ತಿಯ ದಿವ್ಯಶಕ್ತಿ ಎಂದು ಅರ್ಥೈಸಬಹುದು.

## ಪರಶಿವನ ಕುಸುಮ :

ಪರಶಿವನ ಕುಸುಮ ಉದಯಿಸಿದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಉಡುತಡಿ ಗ್ರಾಮದ ಶರಣ ದಂಪತಿಗಳಾದ ಓಂಕಾರ ಶೆಟ್ಟಿ ಮತ್ತು ಲಿಂಗಮ್ಮ ತಾಯಿಯವರ ಪ್ರೀತಿಯ ಪುತ್ರಿಯಾಗಿ ಜನಿಸಿದ ಅವರಿಗೆ ಬಾಲ್ಯದಿಂದಲೂ ಜ್ಞಾನ ಮತ್ತು ಭಕ್ತಿಯ ವಿಚಾರಗಳಲ್ಲಿ ಅಪಾರವಾದ ಆಸಕ್ತಿ ಮತ್ತು ಶ್ರದ್ಧೆಗಳಿದ್ದವು.

ಅಪ್ರತಿಮ ಸೌಂದರ್ಯದಿಂದ ಕೂಡಿದ ಅವರನ್ನು ಒಮ್ಮೆ ಅನಿರೀಕ್ಷಿತವಾಗಿ ಆ ಊರಿನ ರಾಜನಾದ ಕೌಶಿಕನು ಕಂಡು ವಿವಾಹಕ್ಕೆ ಒತ್ತಾಯಿಸಿದಾಗ ಅದನ್ನು ಅವರು ತಿರಸ್ಕರಿಸುತ್ತಾರೆ.

**ಎಮ್ಮೆಗೊಂದು ಚಿಂತೆ, ಸಮಗಾರಗೊಂದು ಚಿಂತೆ,**
**ಧರ್ಮಿಗೊಂದು ಚಿಂತೆ ಕರ್ಮಿಗೊಂದು ಚಿಂತೆ**
**ಒಲ್ಲೆ ಹೋಗು ಸೆರಗ ಬಿಡು ಮರುಳೆ**
**ಎನಗೆ ಚೆನ್ನಮಲ್ಲಿಕಾರ್ಜುನ ದೇವರು**
**ಒಲಿವರೋ, ಒಲಿಯರೋ ? ಎಂಬ ಚಿಂತೆ.**

ರಾಜನಿಂದ ಬಂದ ವಿಪತ್ತಿನಿಂದ ಪಾರಾಗಲು ರಾಜನಿಗೆ ಕೆಲವು ನಿಯಮಗಳನ್ನು ಇರಿಸಿ, ಅದರಂತೆ ನಡೆದರೆ ಮಾತ್ರ ವಿವಾಹಕ್ಕೆ ಸಮ್ಮತಿಸುತ್ತೇನೆಂದು ತಿಳಿಸುತ್ತಾರೆ. ಯಾವುದೇ ಕಾರಣಕ್ಕೂ ಗುರುಲಿಂಗ ಜಂಗಮದ ಆರಾಧನೆಗೆ ಅಡ್ಡಿ ಉಂಟು ಮಾಡಬಾರದೆಂದು ಕಟ್ಟಪ್ಪಣೆ ಅವರದು. ಅತಿ ಕಾಮಿಯಾದ ಕೌಶಿಕನು ನಿಯಮ ಪಾಲಿಸುವುದರಲ್ಲಿ ವಿಫಲಗೊಳ್ಳುತ್ತಾನೆ. ಮೋಹಿಸುವ ವ್ಯರ್ಥ ಪ್ರಯತ್ನ ಕೌಶಿಕ ನಡೆಸಿದಾಗ

**ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ**
**ಎಲುಬಿನ ತಡಿಕೆ, ಕೀವಿನ ಹಡಿಕೆ**
**ಸುಡಲೀ ದೇಹವ, ಒಡಲವಿಡಿದು ಕೆಡದಿರು**
**ಚೆನ್ನಮಲ್ಲಿಕಾರ್ಜುನನರಿ ಮರುಳೇ !**

'ಕಾಮ ಕ್ರೋಧಾದಿಗಳಿಂದ ಕೂಡಿದ ಈ ಜಡ ಶರೀರ ಅತ್ಯಂತ ಕ್ಷಣಿಕ ! ಯಾವಾಗ ನಮ್ಮ ಜೀವನ ಅಂತ್ಯಗೊಳ್ಳುತ್ತದೆಯೋ ತಿಳಿದಿರುವುದಿಲ್ಲ. ಅಲ್ಪಾವಧಿಯ ಈ ಜೀವನದಲ್ಲಿ ನಾವು ನಮ್ಮ ಮನಸ್ಸನ್ನು ಭಗವಂತನತ್ತ ಕೇಂದ್ರೀಕರಿಸಬೇಕು. ಅವಿನಾಶಿಯಾಗಿ ನೆಲೆ ನಿಂತಿರುವ ಅಂತರಂಗದ ಆತ್ಮಾನಂದವನ್ನು ಪಡೆಯುವ ಶೋಧನೆಯ ಗುರಿ ನಮ್ಮದಾಗಬೇಕು' ಎಂದು ಕೌಶಿಕನಿಗೆ ಬದುಕಿನ ಸತ್ಯದ ಅರಿವು ಮಾಡಿಕೊಟ್ಟ ಅವರು ರಾಜನ ಅರಮನೆಯ

* ಕುಚಲಕ್ಕಿ ಕೇರಿ, ಬಿ.ಹೆಚ್.ರಸ್ತೆ, ಶಿವಮೊಗ್ಗ.





ಸೆರೆಯಿಂದ ಮುಕ್ತರಾಗುತ್ತಾರೆ. ಜ್ಞಾನ ಮತ್ತು ಭಕ್ತಿಯ ಉನ್ನತ ಸಾಧನೆಗಾಗಿ ಗುರುಬಸವಣ್ಣನವರು ಕಲ್ಯಾಣದಲ್ಲಿ ನಿರ್ಮಿಸಿದ್ದ ಅನುಭವ ಮಂಟಪದತ್ತ ಅವರು ತಮ್ಮ ಪ್ರಯಾಣ ಬೆಳೆಸುತ್ತಾರೆ.

ಗುರು ಬಸವಣ್ಣನವರ ವೈಚಾರಿಕ ದೃಷ್ಟಿಯಲ್ಲಿ ನಿರ್ಮಾಣಗೊಂಡಿದ್ದ ಅನುಭವ ಮಂಟಪಕ್ಕೆ ಅವರು ಪ್ರವೇಶಿಸಿದಾಗ ಶರಣ ಸಮೂಹ ಪ್ರೀತಿ ವಾತ್ಸಲ್ಯದಿಂದ ಅವರನ್ನು ಬರಮಾಡಿಕೊಳ್ಳುತ್ತಾರೆ. ಅನುಭವ ಮಂಟಪದ ಪೀಠಾಧ್ಯಕ್ಷರಾದ ಅಲ್ಲಮ ಪ್ರಭುದೇವರು ಹಲವಾರು ಪ್ರಶ್ನೆಗಳ ಮೂಲಕ ಅವರಲ್ಲಿನ ವೈರಾಗ್ಯತ್ವವನ್ನು ಪ್ರಶ್ನಿಸುತ್ತಾರೆ. ಅಲ್ಲಮರ ಪ್ರತಿಯೊಂದು ಕಠಿಣವಾದ ಪ್ರಶ್ನೆಗೂ ಸಮರ್ಪಕವಾದ ಉತ್ತರ ನೀಡಿ ಎಲ್ಲರ ಪ್ರಶಂಸೆಗೂ ಪಾತ್ರರಾಗುತ್ತಾರೆ. ಅಕ್ಕ ಮತ್ತು ಅಲ್ಲಮರ ನಡುವಿನ ಆಧ್ಯಾತ್ಮ ಚಿಂತನೆಯ ಸಂವಾದ ಭಾರತೀಯ ಅಧ್ಯಾತ್ಮ ತತ್ತ್ವಶಾಸ್ತ್ರಕ್ಕೊಂದು ಒಂದು ವಿಶಿಷ್ಟ ಕೊಡುಗೆ ಮತ್ತು ಅದೊಂದು ಮೈಲಿಗಲ್ಲಾಗಿ ಗಮನ ಸೆಳೆಯುವ ಸಂಗತಿಗಳಿಂದ ಕೂಡಿರುವುದು ಅತ್ಯಂತ ಗಮನಾರ್ಹ. ಬಸವಣ್ಣನವರು ಮತ್ತು ಬಸವಾದಿ ಶರಣರ ಸತ್ಸಂಗದಲ್ಲಿ ಬೆರೆತು ಅಪರಿಮಿತ ಆನಂದವನ್ನು ಪಡೆದು ಸುಖಿಸಿದ ಅವರು ಆಧ್ಯಾತ್ಮ ಸಾಧನೆಯ ಉತ್ತುಂಗ ಸ್ಥಿತಿ ತಲುಪುತ್ತಾರೆ. ಮುಂದಿನ ಆಧ್ಯಾತ್ಮ ಸಾಧನೆಯ ದಿನಗಳನ್ನು ಶ್ರೀಶೈಲದ ಕದಳಿ ವನದಲ್ಲಿ ಕಳೆಯುವ ಸಂಕಲ್ಪದೊಂದಿಗೆ ಅದರತ್ತ ಪ್ರಯಾಣವನ್ನು ಬೆಳೆಸುತ್ತಾರೆ.

ಪರಮಾತ್ಮನನ್ನು ವೈಚಾರಿಕ ಹಾದಿಯಲ್ಲಿ ಪೂಜಿಸಲು ತಿಳಿಸಿದ ಅವರು ಜೀವಾತ್ಮ, ಪರಮಾತ್ಮ ತತ್ತ್ವದಲ್ಲಿ ಸಮರಸಗೊಳ್ಳಲು ಆತಂಕವಾಗಿರುವ ಕರ್ಮತ್ರಯಗಳನ್ನು ಬಿಡಿಸಿಕೊಳ್ಳುವ ಮಾರ್ಗಸೂಚಿಯ ಪರಿಯನ್ನು 'ಯೋಗಾಂಗ ತ್ರಿವಿಧಿ" ಎಂಬ ಪವಿತ್ರ ಗ್ರಂಥದ ಮೂಲಕ ಅತ್ಯಂತ ಅರ್ಥಪೂರ್ಣವಾಗಿ ಸಾಧಕರಿಗೆ ವಿವರಿಸಿರುವುದನ್ನು ಕಾಣಬಹುದು.

**ಒಳಗೆ ಶೋಧಿಸಿ ಹೊರಗೆ ಶುದ್ಧಯಿಸಿ**
**ಒಳಹೊರಗೆಂಬ ಉಭಯ ಶಂಕೆಯ ಕಳೆದು**
**ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ**
**ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ**
**ಶಿಷ್ಯನ ಸರ್ವಪ್ರಪಂಚವ ನಿವೃತ್ತಿ ಮಾಡಿ**
**ನಿಜೋಪದೇಶವನಿತ್ತು**
**ಆ ಶಿಷ್ಯನ ನಿಜದಾದಿಯನೈದಿಸುವನೀಗ ಜ್ಞಾನಗುರು**
**ಆ ಸಹಜ ಗುರುವೀಗ ಜಗದಾರಾಧ್ಯನು**
**ಅವನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು**
**ಕಾಣಾ ಚೆನ್ನಮಲ್ಲಿಕಾರ್ಜುನಾ.**

'ಶಿಷ್ಯನ ಸರ್ವಪ್ರಪಂಚ ಇಂದ್ರಿಯ ವೃತ್ತಿಯ ಚಾಂಚಲ್ಯತ್ವವನ್ನು ನಿವೃತ್ತಿ ಮಾಡಿ ಆತನಲ್ಲಿ ಉತ್ತಮ ಸಂಸ್ಕಾರಗಳನ್ನು ಉಜ್ವಲಗೊಳಿಸುವುದು ಗುರುವಿನ ಪರಮ ಕರ್ತವ್ಯ. ಶಿಷ್ಯನ ಅಂತರಂಗ ಮತ್ತು ಬಹಿರಂಗಗಳೆರಡನ್ನೂ ಶುದ್ಧ ಮಾಡುವುದರ ಮೂಕ ನಡೆ-ನುಡಿಗಳೆರಡರಲ್ಲಿಯೂ ತಾದಾತ್ಮ್ಯತೆಯನ್ನು ಮೂಡಿಸುವುದು ನಿಜವಾದ ಒಬ್ಬ ಗುರುವಿನ ಲಕ್ಷಣ. ಶಿಷ್ಯನ ಪೂರ್ವಪರ ಸಂಸ್ಕಾರಗಳನ್ನು ಸೂಕ್ಷ್ಮವಾಗಿ ತಿಳಿದು, ಆತನನ್ನು ಗುರು ಸಂಸ್ಕರಿಸಬೇಕು. ಯಾವ ಉತ್ತಮ ಸಂಸ್ಕಾರ ನೀಡುವುದರಿಂದ ಆ ಶಿಷ್ಯ ವಿಕಸಿತಗೊಳ್ಳುತ್ತಾನೆಂಬ ನಿರ್ಣಯತ್ವದ ಅರಿವು ಗುರುವಿನಲ್ಲಿರಬೇಕು. ಶಿಷ್ಯನು ಸರ್ವತೋಮುಖ ಪ್ರಗತಿ ಕಾಣುವಂತೆ ಮಾಡುವುದರ ಮೂಲಕ ಆತನನ್ನು ಸಮಾಜ ಮುಖಿಯನ್ನಾಗಿಸುವ ಮುಖ್ಯ ಕಾರ್ಯಗಾರದಲ್ಲಿ ಯಶಸ್ವಿಯಾಗುವ ಗುರುವೇ ಜಗತ್ತಿಗೆ ಜಗದಾರಾಧ್ಯ ಎನಿಸಿಕೊಳ್ಳಲು ಸಾಧ್ಯ' ಎಂದು ಒಬ್ಬ ಶ್ರೇಷ್ಠ ಗುರುವಿನ ಮಹತ್ವಪೂರ್ಣ ಕರ್ತವ್ಯದ ಕುರಿತು ಅವರು ವ್ಯಕ್ತಪಡಿಸುವ ಅಭಿಪ್ರಾಯ ಪ್ರತಿಯೊಬ್ಬ ಗುರುವಿಗೂ ಆದರ್ಶ ಮತ್ತು ಮನನೀಯವಾದದ್ದು.

**ಬೆಟ್ಟದ ಮೇಲೊಂದು ಮನೆಯ ಮಾಡಿ**
**ಮೃಗಗಳಿಗೆ ಅಂಜಿದೊಡೆಯೆಂತಯ್ಯಾ**
**ಸಮುದ್ರದ ತಡಿಯಲೊಂದು ಮನೆಯ ಮಾಡಿ**
**ನೊರೆತೆರೆಗಳಿಗಂಜಿದಡೆಂತಯ್ಯಾ**
**ಸಂತೆಯೊಳಗೊಂದು ಮನೆಯ ಮಾಡಿ**
**ಶಬ್ದಕ್ಕೆ ನಾಚಿದೊಡೆಯೆಂತಯ್ಯಾ**
**ಚೆನ್ನಮಲ್ಲಿಕಾರ್ಜುನಯ್ಯಾ ಕೇಳಯ್ಯಾ**
**ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದೊಡೆ**
**ಮನದಲ್ಲಿ ಕೋಪವಾ ತಾಳದೆ**
**ಸಮಾಧಾನಿಯಾಗಿರಬೇಕು.**

ಜಗತ್ತು ಸದಾ ದ್ವಂದ್ವಮಯವಾಗಿ ಕಾಣುತ್ತಿರುತ್ತದೆ. ಜೀವನದಲ್ಲಿ ಸುಖ-ದುಃಖ ಮತ್ತು ಸ್ತುತಿ ನಿಂದೆಗಳು ಬರುವುದು ಅತ್ಯಂತ ಸಹಜ. ಅವುಗಳನ್ನು ಸಮಾನ ರೀತಿಯಲ್ಲಿ ಸ್ವೀಕರಿಸಬೇಕು. ಬಂದ ಪ್ರತಿಯೊಂದು ನೋವು ನಲಿವುಗಳನ್ನು ಅಂತಃಸತ್ವದ ಪರೀಕ್ಷೆಯೆಂದು ಭಾವಿಸಬೇಕು. ಎಲ್ಲವನ್ನೂ ಸಮಚಿತ್ತ ಭಾವದಿಂದ ಸ್ವೀಕರಿಸುತ್ತಾ ಮನಸ್ಸಿನಲ್ಲಿ ಸದಾ ಸಮಾಧಾನವನ್ನು ಕಾಪಾಡಿಕೊಳ್ಳಬೇಕು ಎಂದು ತಿಳಿಸುವ ಅವರು ಪರಮಾತ್ಮನ ಒಲುಮೆಗೆ ಬೇಕಾದದ್ದು ಮನಸ್ಸಿನ ನಿರ್ಮಲ ಭಕ್ತಿಯೇ ವಿನಃ ಹೊರಗಿನ ಯಾವುದೇ ಆಡಂಬರವಿಲ್ಲ ಎನ್ನುತ್ತಾರೆ. ನಿರಂತರ ಪರಿಶ್ರಮ, ವೈರಾಗ್ಯ ಮತ್ತು ಭಕ್ತಿಯ ಸಾಧನೆಯಿಂದ ಪ್ರತಿಯೊಬ್ಬರೂ ಸಹ

ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂಬ ಸಂದೇಶ ಅವರದು.

**ಉಸುರಿನಾ ಪರಿಮಳವಿರಲು ಕುಸುಮದಾ ಹಂಗೇಕಯ್ಯಾ**
**ಶಮೆ-ದಮೆ-ಶಾಂತಿ-ಸೈರಣೆಯಿರಲು ಸಮಾಧಿಯ ಹಂಗೇಕಯ್ಯಾ**
**ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ**
**ಚೆನ್ನಮಲ್ಲಿಕಾರ್ಜುನಾ.**

ಮನಸ್ಸಿನ ಭಾವನೆಗಳೆಲ್ಲವೂ ಸದ್ಭಾವನೆಯಾಗಿ ಪರಿವರ್ತನೆಗೊಂಡಾಗ ಕುಸುಮದ ಅವಶ್ಯಕತೆ ಇರುವುದಿಲ್ಲ. ಮನಸ್ಸಿನಲ್ಲಿ ಸದಾ ಶಮೆ-ದಮೆ ಮತ್ತು ಶಾಂತಿ ಸೈರಣೆಗಳು ತುಂಬಿರುವಾಗ ಸಮಾಧಿಸ್ಥಿತಿ ಕಾಣುವ ಪ್ರಯತ್ನದ ಅವಶ್ಯಕತೆ ಸಾಧಕ ಜೀವಿಗಳಿಗೆ ಇರುವುದಿಲ್ಲ. ಮನಸ್ಸಿನ ತುಂಬೆಲ್ಲಾ ಪರಮಾತ್ಮ ತತ್ತ್ವವೇ ತುಂಬಿರುವಾಗ ಏಕಾಂತದ ಪ್ರಮೇಯವೇ ಉಂಟಾಗುವುದಿಲ್ಲ ! ಅಂತಹ ಪರಿಪೂರ್ಣತ್ವ ಸ್ಥಿತಿಯಲ್ಲಿ ಅಂತರಂಗದ ನಿಜಸತ್ಯವನ್ನು ಕಂಡುಕೊಳ್ಳುತ್ತಾರೆ.

**ಲಿಂಗವೆನ್ನೆ ಲಿಂಗೈಕ್ಯವೆನ್ನೆ**
**ಸಂಗವೆನ್ನೆ, ಸಮರಸವೆನ್ನೆ**
**ನೀನೆನ್ನೆ ನಾನೆನ್ನೆ ಚೆನ್ನಮಲ್ಲಿಕಾರ್ಜುನ**
**ಲಿಂಗದಲ್ಲಿ ಘನಲಿಂಗೈಕ್ಯವಾದ ಬಳಿಕ ಏನು**
**ಎನ್ನನೊಲದೆ ಇದ್ದೆನು.**

ಇಷ್ಟಲಿಂಗ ಯೋಗ ಸಾಧನೆಯ ಮೂಲಕ ಮನಸ್ಸನ್ನು ಮಹಾಘನವನ್ನಾಗಿಸಿಕೊಂಡ ಅವರು ಅನಿರ್ವಚನೀಯ ಲಿಂಗದ ಅನುಭಾವವನ್ನು ಅನುಭಾವಿಸುತ್ತಾರೆ. ಕದಳಿಯ ಆಧ್ಯಾತ್ಮ ವನದಲ್ಲಿ ಕಾಯ ಜೀವದ ಹೊಲಿಗೆ ತೆಗೆದು ಪರಮಾತ್ಮನ ಚಿದ್‌ಬೆಳಕಿನಲ್ಲಿ ಬೆಳಕಾಗಿ ಬೆಳಗಿ ಒಂದಾಗುತ್ತಾರೆ. ಪರಮಾತ್ಮನ ಶ್ರೀಮುಕುಟಕ್ಕೆ ಅನರ್ಘ್ಯ ರತ್ನವಾಗಿ ಕಂಗೊಳಿಸಿದ ಅವರು ಸದಾ ಆಧ್ಯಾತ್ಮ ಪ್ರಪಂಚದೊಳಗಿನ ಆಧ್ಯಾತ್ಮ ದೀಪ್ತಿಯಾಗಿ ನೆಲೆನಿಂತಿದ್ದಾರೆ.

## ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರಿಗೆ 'ಗೊರುಚ ಜಾನಪದ ಸಾಹಿತ್ಯ ಗ್ರಂಥ ಪ್ರಶಸ್ತಿ'

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಲ್ಲಿ ಶ್ರೀ ಗೊ.ರು. ಚನ್ನಬಸಪ್ಪನವರು ಸ್ಥಾಪಿಸಿರುವ **'ಗೊರುಚ ದತ್ತಿನಿಧಿ'** ಯೋಜನೆಯಲ್ಲಿ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರ **'ಜಾನಪದ ಸಂಶೋಧನಾ ತೆನೆಗಳು'** ಗ್ರಂಥಕ್ಕೆ **'ಗೊರುಚ ಜಾನಪದ ಸಾಹಿತ್ಯ ಗ್ರಂಥ ಪ್ರಶಸ್ತಿ'** ದೊರೆತಿದೆ. ಪ್ರಶಸ್ತಿಯು ೧೦,೦೦೦/- ನಗದು ಹಾಗೂ ಪ್ರಶಸ್ತಿ ಫಲಕವನ್ನು ಒಳಗೊಂಡಿದೆ. ಈ ಹಿಂದೆ ಶ್ರೀಯುತರು ಬರೆದ **'ಹೂತಿಟ್ಟ ಹಣವೆಲ್ಲ ಮಣ್ಣಾಗಿ ಹೋದಾಗ', 'ಸಾಕು ಮಾಡೋ ಶಿವನೆ'** ಹಾಗೂ **'ರಂಗಣ್ಣ ಕಥೆ'** ಹಸ್ತಪ್ರತಿಗಳಿಗೆ ರಾಜ್ಯಮಟ್ಟದ ಬಹುಮಾನ ಬಂದಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು. ಶ್ರೀಯುತರು ಕರ್ನಾಟಕ ಜಾನಪದ ಕಲೆಗಳು, ಸಾಹಿತ್ಯ ಸಂಪುಟಗಳು, ಸ್ಮರಣ ಸಂಚಿಕೆಗಳು, ಶತಮಾನೋತ್ಸವ ಸ್ಮರಣ ಸಂಪುಟಗಳು, ಕೃತಿಗಳು ಸೇರಿದಂತೆ ೧೬೦ಕ್ಕೂ ಹೆಚ್ಚು ಕೃತಿಗಳನ್ನು ಸಂಪಾದಿಸಿದ್ದಾರೆ. ಜಾನಪದ, ಶರಣ ಸಾಹಿತ್ಯ, ಜೀವನ ಚರಿತ್ರೆಗೆ ಸಂಬಂಧಿಸಿದಂತೆ ೩೦ಕ್ಕೂ ಹೆಚ್ಚು ಕೃತಿಗಳು ಬೆಳಕು ಕಂಡಿವೆ. ಈ ಶುಭ ಸಂದರ್ಭದಲ್ಲಿ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರಿಗೆ ಸಿದ್ಧಗಂಗಾ ಪತ್ರಿಕಾ ಬಳಗ ಅಭಿನಂದನೆ ಸಲ್ಲಿಸುತ್ತದೆ ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆಯು ಶ್ರೀ ಸಿದ್ಧಗಂಗಪ್ಪನವರ ಸಾಹಿತ್ಯ ಕೃಷಿ ನಿರಂತರವಾಗಿ ನಡೆಯುವಂತೆ ಆಶೀರ್ವದಿಸಲಿ ಎಂದು ಶುಭ ಹಾರೈಸುತ್ತದೆ.





# ವಚನಗಳಲ್ಲಿ ಅನುಕಂಪದ ಅಲೆಗಳು

- ಡಾ. ರಾಜಶೇಖರ ಜಮದಂಡಿ *

೧೨ನೇ ಶತಮಾನದಲ್ಲಿ ಮಹಾ ಶಿವಶರಣರ ಅನುಭವದ ಮೂಸೆಯಲ್ಲಿ ಸಾವಿರಾರು ವಚನಗಳು ನಮಗೆ ಮತ್ತು ನಮ್ಮ ನಂತರದವರಿಗೆ ದಾರಿ ದೀಪವಾಗಿವೆ. ಈ ವಚನಗಳನ್ನು ಉಳಿಸಿ ಕಾಪಾಡುವುದರ ಹಿಂದೆ ನೂರಾರು ಶರಣರ ತ್ಯಾಗ ಬಲಿದಾನವಿದೆ ಹಾಗೂ ಮಾನವೀಯ ಸಮಾಜ ನಿರ್ಮಾಣದ ಕನಸಿದೆ, ಕಲ್ಯಾಣ ಕ್ರಾಂತಿಯ ಅನಂತರ ಅಥವಾ ಕಲ್ಯಾಣ ಕ್ರಾಂತಿಗೆ ಕಾರಣವಾದ ವಚನ ಸಾಹಿತ್ಯವನ್ನು ನಿರ್ನಾಮಗೊಳಿಸಬೇಕೆಂದು ಅನೇಕ ಹುನ್ನಾರುಗಳು ಆ ಕಾಲದಲ್ಲಿ ನಡೆದವು. ಈ ಹುನ್ನಾರಿನ ಹಿಂದೆ ಪುರೋಹಿತಶಾಹಿಗಳ, ಸಂಪ್ರದಾಯವಾದಿಗಳ, ರಾಜ್ಯಶಾಹಿಗಳ ಮತ್ತು ಪಟ್ಟಭದ್ರಹಿತಶಕ್ತಿಗಳ ಕುತಂತ್ರವಿತ್ತು. ಇದಕ್ಕೆ ಪ್ರತಿಯಾಗಿ ತಮ್ಮ ಪ್ರಾಣವನ್ನೇ ಒತ್ತೆಯಿಟ್ಟು ಹೋರಾಡಿ ವಚನಗಳನ್ನು ಕಾಪಾಡಿದ ಅನೇಕ ಶರಣಚೇತನಗಳ ಬಗೆಗೆ ನಾವು ಎಷ್ಟೇ ಗುಣಗಾನ ಮಾಡಿದರೂ ಕಡಿಮೆ. ತಮ್ಮ ಪ್ರಾಣಕ್ಕಿಂತ ವಚನಗಳ ರಕ್ಷಣೆ ಗಮನಾರ್ಹವಾದ ಕೆಲಸವೆಂದೇ ಶರಣರು ಭಾವಿಸಿಕೊಂಡಿದ್ದರು. ಅವರು ಅಂದು ವಚನದ ಕಟ್ಟುಗಳನ್ನು ರಕ್ಷಣೆ ಮಾಡುವ ಸಲುವಾಗಿ ಹಳ್ಳ-ಕೊಳ್ಳ, ಕಾಡು-ಕಣಿವೆ, ಹಗಲು-ರಾತ್ರಿ, ಬಿಸಿಲು-ಮಳೆ ಮುಂತಾದ ತೊಂದರೆಗಳನ್ನು ಲೆಕ್ಕಿಸಲಿಲ್ಲ. ವಚನಗಳ ತಾಳೆಗರಿಗಳನ್ನು ದಟ್ಟವಾದ ಕಾಡುಗಳ ಗುಹೆಗಳಲ್ಲಿ ಅಡಗಿಸಿಟ್ಟರೆಂಬುದು ತಿಳಿದುಬರುತ್ತದೆ.

* * *

ವಚನಕಾರರ ಉದ್ದೇಶ ಜನ ಸಮ್ಮುಖವಾದುದರಿಂದ ಅವರ ಭಾಷೆ, ರೀತಿ, ರೂಪ, ಭಾವನೆಗಳೆಲ್ಲದರ ಹಿಂದೆ ಜಾನಪದ ಸತ್ವ ಹಿನ್ನೆಲೆಯಾಗಿದೆ. ಆಡುನುಡಿಗೆ ಹತ್ತಿರವಾದ ಭಾಷೆಯನ್ನು ಬಳಸಿದ ಅವರ ನುಡಿಗಳು ಇಂದಿಗೂ ಪರಿಣಾಮಕಾರಿಯಾಗಿ ಸಂಚಲನವನ್ನುಂಟು ಮಾಡುತ್ತಿವೆ. ಇಂಥ ಅಮೂಲ್ಯವಾದ ವಚನಗಳಲ್ಲಿ ಪ್ರಪಂಚದ ಎಲ್ಲ ಆಗು-ಹೋಗುಗಳ ವಸ್ತು ವಿಷಯಗಳಿವೆ. ಅವುಗಳ ಅಧ್ಯಯನ, ತಿಳುವಳಿಕೆ, ಪಾಲನೆ ಮಾಡಿದರೆ ನಾವಿರುವ ಸಮಾಜ ಪಾವನವಾಗುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಮೊದಲು ಪ್ರತಿಯೊಬ್ಬರ ಮನಸ್ಸು ಅದರೆಡೆಗೆ ಸದಾ ಹರಿಯುವಂತಾಗಬೇಕು. ವಚನಗಳನ್ನು ನಾವು ಕಾಪಾಡಿದರೆ ಅಥವಾ ಅಧ್ಯಯನ ಮಾಡಿದರೆ ಅವು ನಮ್ಮ ವ್ಯಕ್ತಿತ್ವವನ್ನು ರೂಪಿಸುತ್ತವೆ.

ವಚನ ಸಾಹಿತ್ಯವೆಂದರೆ ಜೀವನ ಮೌಲ್ಯಗಳ ಒಂದು ಸುಂದರ ಕರಂಡಕ. ವಚನ ಸಾಹಿತ್ಯವೆಂಬುದೇ ಉತ್ತಮ ಜೀವನ ಪ್ರಣಾಳಿಕೆಯ ಒಂದು ಗುಚ್ಛವಿದ್ದಂತೆ. ವಚನಕಾರರು ಸತ್ಯಕ್ಕೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು. ಅಂತೆಯೇ ಸತ್ಯವ ನುಡಿಯುವುದೇ ದೇವಲೋಕ, ಮಿತ್ಯವ ನುಡಿಯುವುದೇ ಮರ್ತ್ಯಲೋಕ ಎಂದು ಹೇಳಿರುವರು. ಎರಡನೆಯದಾಗಿ ವಚನಕಾರರು ಅಹಿಂಸೆಗೆ ಒತ್ತು ನೀಡಿದರು. ದಯಾಗುಣಗಳನ್ನು ಎಲ್ಲರಲ್ಲಿ ಬಿತ್ತಿ ಬೆಳೆಸಿದರು. ದಯೆಯೇ ಧರ್ಮದ ಮೂಲವೆಂದು, ದಯುಬೇಕು ಸಕಲ ಪ್ರಾಣಿಗಳೆಲ್ಲರಲಿ ಎಂದು ಸಾರಿ ಹೇಳಿದರು. ನಯವಿನಯ, ಗೌರವ, ಆದರ್ಶಗಳಿಗೆ ಮನೆ ಮಾಡಿದವರೆಂದರೆ ೧೨ನೇ ಶತಮಾನದ ವಚನಕಾರರು. 'ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕ', ಮೃದು ವಚನವೇ ಸಕಲ ಜಪತಪಂಗಳಯ್ಯಾ ಎನ್ನುತ್ತಾ 'ಎನಗಿಂತ ಕಿರಿಯರಿಲ್ಲ'ವೆಂದು ನುಡಿದು-ನಡೆದು ತೋರಿದರು. ಸಮಾಜದ ಒಳಿತಿಗಾಗಿ ಸದಾ ಸಿದ್ಧತೆಯಲ್ಲಿದ್ದ ವಚನಕಾರರು ಸ್ವಾತಂತ್ರ್ಯ ಸಮಾನತೆ, ಸಹೋದರತ್ವ ಹಾಗೂ ಸಾಮಾಜಿಕ ನ್ಯಾಯಗಳಿಗಾಗಿ ಹೋರಾಟ ನಡೆಸಿದರು. ಕಾಯಕದ ಮೂಲ ಅರ್ಥಿಕ ಅಸಮಾನತೆಯನ್ನು, ದಾಸೋಹದ ಮೂಲಕ ದಾನದ ಮಹತ್ವವನ್ನು, ಅಂತರ್‌ಜಾತಿ ವಿವಾಹದ ಮೂಲಕ ಸಾಮಾಜಿಕ ಅಸಮಾನತೆಯನ್ನು, ಇಷ್ಟಲಿಂಗ ಪೂಜೆಯ ಮೂಲಕ ಸಮಾನತೆಯನ್ನು ಏಕಕಾಲದಲ್ಲಿ ಜಾರಿಗೆ ತಂದರು.

ವಚನಕಾರರು ಸಂಸಾರ ತ್ಯಾಗ ಬೋಧಿಸಲಿಲ್ಲ. ಅದರ ಬದಲಾಗಿ ಜೀವನ ಪ್ರೀತಿಯನ್ನು ಬೋಧಿಸಿದರು. ಜೀವನ ಮಾಯೆಯಲ್ಲ ಅದು ಬಹು ಸುಂದರವಾಗಿದೆ ಎಂದು ಆಧ್ಯಾತ್ಮದ ಹಿನ್ನೆಲೆಯಲ್ಲಿ ಪ್ರತಿಯೊಬ್ಬರೂ ಸಾಧನೆ ಮಾಡಲು ತಿಳಿಸಿದರು. ಶರಣರ ಹೋರಾಟದಲ್ಲಿ 'ಕೊಲ್ಲುವನೆಂಬ ಭಾಷೆ ಪರಮಾತ್ಮನದ್ದಾದರೆ ಗೆಲ್ಲುವೆನೆಂಬ ಭಾಷೆ ಶರಣನದ್ದು' ಆಗಿರುತ್ತದೆ. ಅಜ್ಞಾನದಿಂದ ಬದುಕಿನ ಬಂಡಿಯನ್ನು ಸರಿಯಾಗಿ ಎಳೆಯದೇ ಹಾದಿ ತಪ್ಪಿದವರನ್ನು ಕಂಡ ಬಸವಣ್ಣನವರು :

* ಬಸವಕೃಪ, ಬಾಲಾಜಿ ಬಡಾವಣೆ, ಪಟೇಲ್ ಹೈಸ್ಕೂಲ್ ಹತ್ತಿರ, ಬಳ್ಳಾರಿ ರಸ್ತೆ, ಹೊಸಪೇಟೆ-೫೮೩ ೨೦೧. ಬಳ್ಳಾರಿ ಜಿಲ್ಲೆ ಮೊ: ೯೭೪೫೨೮೧೩೧೩

**ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ**
**ಬಾಯಲ್ಲಿ ಸುರೆಯ ಗಡಿಗೆ, ಕೊರಳಲ್ಲಿ ದೇವರಿರಲಿ**
**ಅವರ ಲಿಂಗನೆಂಬೆ, ಸಂಗನೆಂಬೆ**
**ಕೂಡಲಸಂಗಮದೇವಾ**
**ಅವರ ಮುಖಲಿಂಗಿಗಳೆಂಬೆ.**

ಹಾದಿ ತಪ್ಪಿದವರನ್ನು, ಹಿಂಸೆ ಮಾಡುವವರನ್ನು, ನೈತಿಕತೆ ಕಳೆದುಕೊಂಡವರನ್ನು ಎಚ್ಚರಿಕೆ ನೀಡಿ ಉತ್ತಮ ವ್ಯಕ್ತಿತ್ವ ರೂಪಿಸಬೇಕೆಂಬ ಮೂಲೋದ್ದೇಶ ಶರಣರದ್ದಾಗಿತ್ತು. ಅಂದರೆ ಎಡಗೈಯಲ್ಲಿ ಕತ್ತಿ, ಬಲಗೈಯಲ್ಲಿ ಮಾಂಸ, ಬಾಯಲ್ಲಿ ಹೆಂಡವಿದ್ದ ದಲಿತ ಭಕ್ತನೊಬ್ಬನನ್ನು ಬಸವಣ್ಣನವರು ಆಕಸ್ಮಿಕವಾಗಿ ನೋಡಿದಾಗ, ಆತನ ಮೇಲೆ ಮಾನವೀಯ ಅನುಕಂಪ ಹರಿಸಿ ಈ ವಚನ ಹೇಳಿದ್ದಾರೆ. ಕಾರಣ ಅವರಿಗೆ ಯಾರೂ ಸರಿಯಾದ ತಿಳಿವಳಿಕೆ ನೀಡಿಲ್ಲದ್ದರಿಂದ ಅವರ ರೀತಿ-ನೀತಿಗಳು ದಾರಿ ತಪ್ಪಿವೆ. ಅವರಲ್ಲಿರುವ ಹತಾಶವಾದ ಆಲೋಚನೆಯಿಂದ ಕುಡಿತಕ್ಕೆ ಬಲಿಯಾಗಿರಬಹುದೆಂದು ವಾತ್ಸಲ್ಯದಿಂದ ಸರಿದಾರಿಗೆ ತರಲು ಬಸವಣ್ಣನವರು ಪ್ರಯತ್ನಿಸಿದರು.

ವಚನಕಾರರಲ್ಲಿ ಎಂತಹ ಮಾನವೀಯ ಅನುಕಂಪವಿತ್ತೆಂಬುದಕ್ಕೆ ಬಸವಣ್ಣನವರ ಜೀವನದ ಒಂದು ಪ್ರಸಂಗ ಈ ವಚನ ನೆನಪಿಸುತ್ತದೆ.

**ಆಕಳ ಕಳ್ಳರು ಕೊಂಡೊಯ್ದರೆನ್ನದಿರಂಬೋ ನಿಮ್ಮ ಧರ್ಮ**
**ಬೊಬ್ಬಿಡದಿರಿಂಭೋ ನಿಮ್ಮ ಧರ್ಮ**
**ಅರಸಾಡದಿರಿಂಭೋ ನಿಮ್ಮ ಧರ್ಮ**
**ಅಲ್ಲಿ ಉಂಬಡೆಯೂ ಸಂಗಯ್ಯ ಇಲ್ಲಿ**
**ಉಂಬಡೆಯೂ ಸಂಗಯ್ಯ**
**ಕೂಡಲಸಂಗಮದೇವ ಏಕೋ ಭಾವ.**

ಭಕ್ತರ ವೇಷದಲ್ಲಿದ್ದ ಗೊಲ್ಲ ಕಳ್ಳರು ಒಮ್ಮೆ ಬಸವಣ್ಣನವರ ಮನೆಯ ಹಸುಗಳನ್ನು ಕದ್ದೊಯ್ದರು. ಅವುಗಳಿಗೆ ಸಂಬಂಧಿಸಿದ ಕರುಗಳನ್ನು ಅಲ್ಲಿಯೇ ಬಿಟ್ಟು ಹೋಗಿದ್ದರು. ಇದನ್ನು ಗಮನಿಸಿದ ಬಸವಣ್ಣನವರು ಆ ಹಸುಗಳ ಕರುಗಳನ್ನು ಅವುಗಳೊಂದಿಗೆ ನಾನು ಕಳುಹಿಸದೇ ಹಾಗೆ ಇಲ್ಲಿಟ್ಟುಕೊಂಡಿರುವುದಕ್ಕೆ ನಾನೇ ಕಳ್ಳನೆಂದು ಕೊಳ್ಳುತ್ತಾರೆ. ಆ ಹಸುಗಳನ್ನು ಕದ್ದು ತೆಗೆದುಕೊಂಡು ಹೋಗುತ್ತಿದ್ದ ಗೊಲ್ಲರನ್ನು ಕರೆದು, ಕೂಡಲೇ ಈ ಕರುಗಳನ್ನೂ ಜೊತೆಗೆ ತೆಗೆದುಕೊಂಡು ಹೋಗಲು ಸೂಚಿಸುತ್ತಾರೆ. ಏಕೆಂದರೆ ಕರುಗಳು ತಮ್ಮ ತಾಯಂದಿರನ್ನು ಕಳೆದುಕೊಂಡು ಕೊರಗುತ್ತವೆ, ಉಪವಾಸ ಬೀಳುತ್ತವೆ, ಹಸಿವೆಯಿಂದ ನರಳುತ್ತವೆಯಾದ್ದರಿಂದ ತಾಯಿ ಮಕ್ಕಳನ್ನು ಆಗಲಿಸಬಾರದೆಂದು ಅನುಕಂಪ ಸೂಚಿಸುತ್ತಾರೆ.

ಶರಣರಿಗೆ ಪ್ರಾಣಿ ಹತ್ಯೆ ಮಹಾಪಾಪವೆಂಬ ಅರಿವು ಅವರಿಗಿತ್ತು. ನಮ್ಮಂತೆಯೇ ಅವುಗಳಿಗೆ ಜೀವವಿದೆ. ಅವುಗಳೂ ತಮ್ಮ ಮಕ್ಕಳನ್ನು ಸಲಹುತ್ತವೆ. ನಮ್ಮಂತೆ ಬದುಕುವ ಹಕ್ಕಿರುವುದರಿಂದ ಪ್ರಾಣಿ ಪಕ್ಷಿಗಳನ್ನು ಪ್ರೀತಿಯಿಂದ ಸಲಹುವ ಮನಸ್ಸು ಶರಣರಲ್ಲಿತ್ತು. ಇದಕ್ಕೆ ಪೂರಕವಾಗಿ ಬಸವಣ್ಣನವರ ವಚನ ಹೀಗಿದೆ :

**ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು**
**ಎಲೆ ಹೋತೇ ಅಳುಕಂಡ್ಯಾ**
**ವೇದವನೋದಿದವರ ಮುಂದೆ ಅಳುಕಂಡ್ಯಾ**
**ಶಾಸ್ತ್ರವ ಕೇಳಿದವರ ಮುಂದೆ ಅಳುಕಂಡ್ಯಾ**
**ನೀನು ಅತ್ತುದಕ್ಕೆ ತಕ್ಕುದ ಮಾಡುವ**
**ಕೂಡಲಸಂಗಮದೇವಾ.**

ಬಡವರನ್ನು ಕಂಡ ಹರಿಶ್ಚಂದ್ರ ತನ್ನಲ್ಲಿದ್ದ ಸಂಪತ್ತನ್ನು ದಾನ ಮಾಡಿದಂತೆ, ಶವಯಾತ್ರೆಯನ್ನು ನೋಡಿದ ಬುದ್ಧನು ವೈರಾಗ್ಯಭಾವ ತಾಳಿದಂತೆ, ಯಜ್ಞಕ್ಕೆ ಬಲಿ ಕೊಡುವುದನ್ನು ಕಂಡ ಬಸವಣ್ಣನವರು ವೈದಿಕ ಧರ್ಮವನ್ನೇ ತ್ಯಜಿಸುತ್ತಾರೆ. ಯಜ್ಞಶಾಲೆಯ ಮುಂದೆ ಅರಚುತ್ತಿರುವ ಹೋತವೊಂದನ್ನು ಕಂಡ ಬಸವಣ್ಣನವರು ಮರುಗಿ ಅದರ ತಲೆಯನ್ನು ನೇವರಿಸುತ್ತಾ ತಾವೂ ದುಃಖಿಸುತ್ತಾ ನಿನ್ನ ಕೊಂದವರು ಉಳಿವರೆ ? ಅವರಿಗೂ ದೇವರು ಶಿಕ್ಷೆಯನ್ನು ಕೊಡುತ್ತಾನೆ ನೀನು ದುಃಖಿಸಬೇಡ ಎಂದು ಸಮಾಧಾನ ಹೇಳುತ್ತಾರೆ. ಇಲ್ಲಿ ಅವರಲ್ಲಿದ್ದ ಅಹಿಂಸಾ ಪ್ರವೃತ್ತಿಯ ಪ್ರತಿಪಾದನೆ ಎದ್ದು ಕಾಣುತ್ತದೆ.

ಬಸವಣ್ಣನವರು ಪ್ರಾಣಿ-ಪಕ್ಷಿಗಳ ಬಗ್ಗೆಯೂ ಹೇಗೆ ಅನುಕಂಪ ವ್ಯಕ್ತಪಡಿಸುತ್ತಿದ್ದರೆಂದರೆ 'ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನು ? ಕೋಳಿಯೊಂದು ಗುಟುಕ ಕಂಡರೆ ಕೂಗಿ ಕರೆಯದೇ ತನ್ನ ಬಳಗವನು' ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದಡೆ ಕಾಗೆ, ಕೋಳಿಯಿಂದ ಕರಕಷ್ಟ ಕೂಡಲ ಸಂಗಮದೇವಾ ಎಂಬ ವಚನದಲ್ಲಿ ಆ ಕೋಳಿ ಕಾಗೆಯಂತೆ ಒಬ್ಬರನೊಬ್ಬರು ಸಹಕರಿಸಬೇಕು, ಅನುಸರಿಸಬೇಕು. ಇಲ್ಲದಿದ್ದರೆ ಮಾನವ ಜನ್ಮ ವ್ಯರ್ಥವಾಗುತ್ತದೆಂದು ಹೇಳಿದ್ದಾರೆ. 'ಸಚರಾಚರ ಪ್ರಾಣಿಗಳಲ್ಲಿ ವಿರೋಧವಿಲ್ಲದಿರಬೇಕು' ಎಂದು ಆದಯ್ಯನೂ ಹೇಳಿದ್ದಾನೆ.

**ದಯದಿಂದ ಬಿಟ್ಟು ಧರ್ಮವಿಲ್ಲ**
**ವಿಚಾರದಿಂದ ಬಿಟ್ಟು ಧರ್ಮವಿಲ್ಲ**
**ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ.**

(ಸಕಲೇಶ ಮಾದರಸ)





ಅಹಿಂಸಾ ಪರಮೋಧರ್ಮದ ಮೂಲಕ ಜೀವದಯೆಯ ಸೂತ್ರ ಮನುಕುಲಕ್ಕೆ ನೀಡಿದ ಶ್ರೇಯಸ್ಸು ವಚನಕಾರರಿಗೆ ಸಲ್ಲುತ್ತದೆ. 'ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವುದೇ' ಅನುಕಂಪದ ಮೂಲಮಂತ್ರವಾಗಿದೆ. ಮಾನವ ಮಹಾನುಭಾವನಾಗಬೇಕು ನಂತರ ದೇವಮಾನವನಾಗಬೇಕಾದರೆ ಮೊದಲು ಪ್ರಾಣಿ ಪಕ್ಷಿಗಳನ್ನು ಆದರಿಸಬೇಕೆಂದು ವಚನಕಾರರು ಹೇಳಿರುವರು. ಈ ಬದುಕು ಕೇವಲ ಹುಟ್ಟುವುದಕ್ಕೆ ಸಾಯುವುದಕ್ಕೆ ಇಲ್ಲ. ಪರಮಾತ್ಮನ ಒಂದು ಅಂಶವಾದ ಜೀವಾತ್ಮ ಸಾಧನೆಯ ಮಾರ್ಗದಲ್ಲಿ ನಡೆದು ಪರಾತ್ಪರವಾದ ಪರಮಾತ್ಮನಲ್ಲಿ ಐಕ್ಯ ಸಾಧಿಸಬೇಕಾದರೆ ಪ್ರತಿಯೊಬ್ಬರಲ್ಲಿ ಮಾನವೀಯ ಮೌಲ್ಯದ ಅನುಕಂಪದ ಅಲೆಗಳು ಏಳುತ್ತಿರಬೇಕು. ಇಂದು 'ಹಂಚಿಕೊಂಡು ತಿನ್ನುವ ದಿನಗಳು ದೂರಾಗಿ ಹರಿದುಕೊಂಡು ತಿನ್ನುವ ದಿನಗಳು' ಹತ್ತಿರವಾಗಿರುವುದು ಶೋಚನೀಯ.

**ಅರಿದರಿದು ಸಮಗಾಣಿಸಬಾರದು**
**ತ್ರಾಸಿನ ಕಟ್ಟಳೆಯಂತಿನಿಸು ವೆಗ್ಗಳವಾದಡೆ**
**ಈಶ್ವರನು ಒಡೆಯಿಕ್ಕದೆ ಮಾಡುವನೆ ?**
**ಪಾತ್ರ ಅಪಾತ್ರವೆಂದು ಕಂಡಡೆ ಶಿವನೆಂತು ಮೆಚ್ಚುವನು ?**
**ಜೀವ ಜೀವಾತ್ಮ ಸರಿಯೆಂದು ಕಂಡಡೆ**
**ಸಮವೇದಿಸದಿಪ್ಪನೇ ಶಿವನು ?**
**ತನ್ನ ಮನದಲ್ಲಿ 'ಯತ್ರ ಜೀವಃ ತತ್ರ ಶಿವ' ವೆಂದು**
**ಸರ್ವಜೀವದಯಾಪಾರಿಯಾದಡೆ**
**ಕೂಡಲಸಂಗಮದೇವನು**
**ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ ?**

ಸಮಾಜದಲ್ಲಿ ತಾನೊಬ್ಬ ಆದರ್ಶ ಸಾಧಕನಾಗಬೇಕೆಂದರೆ ಮೊದಲು 'ತನ್ನಂತೆ ಇತರರು' ಎಂಬ ಭಾವನೆ ಹೊಂದಬೇಕು. ಇದು ಅಂತರಂಗ ಮತ್ತು ಬಹಿರಂಗದಲ್ಲಿ ಸಂಚಲನಗೊಂಡಿರಬೇಕು. ಈ ರೀತಿ ಸಮದರ್ಶಿಯಾಗಿ, ಸಮದೃಷ್ಟಿಯಾಗಿ ಬಾಳುವುದು ಕಷ್ಟವಾದರೂ ಪ್ರಯತ್ನಕ್ಕಿಂತ ಹೆಚ್ಚಿವದು ಯಾವುದೂ ಇಲ್ಲ. ಇಂತಹ ಮನೋಭಾವ ಹೊಂದಿದರೆ ಮೇಲು-ಕೀಳು, ಪಾತ್ರ-ಅಪಾತ್ರಗಳೆಂಬ ಬೇಧಗಳು ಕಾಣಿಸಲಾರವು. ಈ ಸರ್ವಸಮಾನತೆಯಲ್ಲಿ ವ್ಯತ್ಯಾಸವಾದರೆ ಶಿವದೃಷ್ಟಿ ಅದನ್ನು ಸಮಗೊಳಿಸುತ್ತದೆ. ಈ ದೃಷ್ಟಿ ಬರುವುದಕ್ಕಾಗಿಯೇ ಸಾಧಕ ಸರ್ವಜೀವದಯಾಪಾರಿಯಾಗಬೇಕು. ಎಲ್ಲಿ ಜೀವವಿದೆಯೋ ಅಲ್ಲೆಲ್ಲಾ ಶಿವನಿದ್ದಾನೆಂಬ ಭಾವನೆ ತನ್ನ ಮನದಲ್ಲಿ ಬೆಳೆಸಿಕೊಂಡಾಗ ಪ್ರಾಣಲಿಂಗಾನುಸಂಧಾನವಾಗುತ್ತದೆ. ಸಕಲ ಜೀವರಾಶಿಗಳಲ್ಲಿ ಅನುಕಂಪದ ಅಲೆ ಎದ್ದರೆ ಆ ಅಂತಃಪ್ರಜ್ಞೆಯಲ್ಲಿ ಶಿವ ಇಳಿದು ಆತನನ್ನು ಉದ್ಧರಿಸುತ್ತಾನೆ.

ಎಲ್ಲಿ ಶಿವನ ಸ್ಮರಣೆ ಇರುತ್ತದೆಯೋ ಅಲ್ಲಿ ಸೌಂದರ್ಯವಿರುತ್ತದೆ. ಎಲ್ಲಿ ಸೌಂದರ್ಯವಿರುತ್ತದೆಯೋ ಅಲ್ಲಿ ಸತ್ಯವಿರುತ್ತದೆ. ಎಲ್ಲಿ ಸತ್ಯವಿರುತ್ತದೆಯೋ ಅಲ್ಲಿ ಸ್ವಚ್ಛತೆ, ಸಮಾನತೆ, ಸಂಪ್ರೀತಿ, ಸತ್ಕಾರ್ಯಗಳಿರುತ್ತವೆ.

**ದಯವಿಲ್ಲದ ಧರ್ಮವದೇವುದಯ್ಯಾ**
**ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ**
**ದಯವೇ ಧರ್ಮದ ಮೂಲವಯ್ಯ**
**ಕೂಡಲಸಂಗಮಯ್ಯನಂತಲ್ಲದೊಲ್ಲನಯ್ಯಾ.**

ಕರುಣೆಗೆ ಇದು ಪ್ರಸಿದ್ಧವಾದ ವಚನವಾಗಿದೆ. ಧರ್ಮದ ಇನ್ನೊಂದು ಮುಖವೆ ದಯೆ. ಮನುಷ್ಯ ಧರ್ಮದ ಮೂಲಭೂತ ಧೋರಣೆ ಸಕಲಚರಾಚರ ವಸ್ತುಗಳನ್ನು ತೆರೆದು ಕಣ್ಣುಗಳಿಂದ ಗಮನಿಸುವುದು. ದಯೆಯುಳ್ಳ ಮನುಷ್ಯನಿಗೆ ಜಗತ್ತು ತಲೆಬಾಗುತ್ತದೆ. ಸತ್ಪಥ ತುಳಿಯುವಾಗ ಅಡ್ಡಿ ಆತಂಕ ಎದುರಾದರೆ ಒಳಗಿನ ದಯೆ-ತಾಳ್ಮೆಯನ್ನು ಕಳೆದುಕೊಳ್ಳದಿರುವುದು. ಅಂದರೆ ಧರ್ಮದಿಂದ ನಡೆವಾಗ ದಯೆಯೆಂಬುದು ಹತ್ತಿರದಲ್ಲಿರುತ್ತದೆ. ಇಂತಹ ದಯೆವಿಲ್ಲದ ಮನುಷ್ಯ ಪಶುವಿಗಿಂತಲೂ ಕಡಿಮೆಯಾಗಿರುತ್ತಾನೆ. ಇಲ್ಲಿ ದಯೆ ಎನ್ನುವುದು ಪ್ರಾಣಿಗಳ ಮೇಲೆ ನಾವು ತೋರುವ ಅನುಕಂಪ ಅಥವಾ ಕರುಣೆ ಅಷ್ಟೇ ಅಲ್ಲ. ಇದನ್ನೂ ಮೀರಿದಂತೆ ಸುತ್ತಮುತ್ತಲಿನ ಪ್ರಕೃತಿಯಲ್ಲಿ ಶಿವಸ್ವರೂಪವನ್ನು ಕಲ್ಪಿಸಿಕೊಂಡರೆ ಆತ್ಮದರ್ಶನವಾಗುವುದು.

ವಿಚಾರವಂತ ಮಾನವನು ಮಾತ್ರ ಪ್ರಪಂಚದ ಪ್ರತಿ ಜೀವಿಗಳಲ್ಲೂ ಪರಮಾತ್ಮನ ಸ್ವರೂಪವನ್ನು ಕಾಣಬಹುದು. 'ಜೀವಜಾಲದಲ್ಲಿದೆ ಚರಾಚರವೆಲ್ಲ' ಎಂದಿರುವ ಬಸವಣ್ಣನವರು :

**ಮರಗಿಡ ಬಳ್ಳಿ ಧಾನ್ಯಂಗಳ ಬೆಳಸೆಲ್ಲವ ತರಿತರಿದು**
**ಪ್ರಾಣವ ಕೊಂದುಂಡು ಶರೀರ ಹೊರೆವ ದೋಷಕ್ಕೆ**
**ಇನ್ನಾವುದು ವಿಧಿಯಯ್ಯಾ ?**

ಜೀವ ಚೈತನ್ಯವಾದ ಪ್ರಕೃತಿಯಲ್ಲಿನ ಪ್ರತಿ ಸಸ್ಯಗಳಿಗೂ ಜೀವವಿದೆಯಾದ್ದರಿಂದ ಸಸ್ಯಾಹಾರ ಸೇವನೆ ಮಾಡುವುದು ಹಿಂಸೆಯೆನ್ನುವ ಭಾವ ಅವರದು. ಹಾಗಾಗಿ ಸ್ವೀಕರಿಸುವ ಆಹಾರವನ್ನು ನಿತ್ಯ ಲಿಂಗಕ್ಕರ್ಪಿಸಿ ಪ್ರಸಾದವ ಕೊಂಡು ನಿರ್ದೋಷಿಗಳಾಗಿ ಬದುಕಬೇಕೆಂಬುದು ಅವರ ಚಿಂತನೆ. ಒಟ್ಟಾರೆ ಬಸವಣ್ಣನವರ ವಚನಗಳಲ್ಲಿರುವ ದಯೆ, ಅಹಿಂಸೆ, ಅನುಕಂಪದ ಅಲೆಗಳ ಮಿಡಿತ, ಎಲ್ಲರ ಹೃದಯಗಳಲ್ಲಿಯೂ ಚೈತನ್ಯದ ದಿವ್ಯಧ್ವನಿಯಾಗಿ ಮಿಡಿಯುವಂತೆ ಮಾಡುತ್ತದೆ.

# ಮಹಾಮಾನವತಾವಾದಿ ಪ್ರಭುದೇವರು

– ಪೂಜ್ಯ ಶ್ರೀ ವಿಜಯಕುಮಾರ ಮಹಾನುಭಾವಿಗಳು*

ಎತ್ತಣ ಮಾಮರ ಎತ್ತಣ ಕೋಗಿಲೆ
ಎತ್ತಣಿಂದೆತ್ತ ಸಂಬಂಧವಯ್ಯ ?
ಬೆಟ್ಟದ ನೆಲ್ಲಿಯ ಕಾಯಿ
ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯ ?
ಎನಗೆಯೂ ಗುಹೇಶ್ವರ ಲಿಂಗಕ್ಕೆಯೂ
ಎತ್ತಣಿಂದೆತ್ತ ಸಂಬಂಧವಯ್ಯ ?

ಕೋಗಿಲೆಗೂ ಮಾವಿನ ಮರಕ್ಕೂ ಎಲ್ಲಿಂದೆಲ್ಲಿ ಸಂಬಂಧ ? ನೆಲ್ಲಿಯ ಕಾಯಿಗೂ ಉಪ್ಪಿಗೂ ಎಲ್ಲಿಂದೆಲ್ಲಿ ಸಂಬಂಧ ? ಮಾಮರವೆಲ್ಲೋ ಕೋಗಿಲೆಯೆಲ್ಲೋ ಎಲ್ಲಿಂದೆಲ್ಲಿ ಸಂಬಂಧ ? ಪ್ರಭುದೇವರ ವಚನಗಳನ್ನು ಕನ್ನಡ ಸಾರಸ್ವತ ಪ್ರಪಂಚದ ದಿಗ್ಗಜಗಳೆಲ್ಲ ನೆನಪಿಸಿಕೊಂಡು ಕಾವ್ಯ, ಕಥೆ ರಚನೆ ಮಾಡಿದ್ದಾರೆ.

ಪ್ರಭುದೇವರು ಯಾರು ? ಈ ಪ್ರಶ್ನೆಗೆ ಆಧುನಿಕ ಕವಿಗಳಾದ ದ.ರಾ. ಬೇಂದ್ರ, ಎಂ. ಗೋಪಾಲಕೃಷ್ಣ ಅಡಿಗ, ಡಾ. ಸಿದ್ಧಯ್ಯ ಪುರಾಣಿಕ, ಶಿಶುವಿನಾಳದ ಷರೀಫ್ ಮತ್ತು ಆಧುನಿಕ ಕಥೆಗಾರರಾದ ಯು.ಆರ್. ಅನಂತಮೂರ್ತಿ, ದೇವನೂರ ಮಹಾದೇವ, ಕುಂ. ವೀರಭದ್ರಪ್ಪ ಉತ್ತರ ಕೊಡುತ್ತಾರೆ. ಬೇಂದ್ರೆಯವರು ಅಡಿಗರು ಕಾವ್ಯ ರಚನೆಯಲ್ಲಿ ಕನ್ನಡ ಭಾಷೆಯನ್ನು ಚೆನ್ನಾಗಿ ದುಡಿಸಿಕೊಂಡವರು. ಕನ್ನಡ ಭಾಷೆಯನ್ನು ಅದರ ಅರ್ಥಪರಂಪರೆ, ಧ್ವನಿಗಳನ್ನು ಬಾಗು, ಬಳಕು ಲಯವನ್ನು ಚೆನ್ನಾಗಿ ತಮ್ಮ ತಮ್ಮ ಕವಿತೆ, ಕವನಗಳಲ್ಲಿ ತಂದವರು ಇವರು. ಕಾವ್ಯ ಕವಿತೆಯಲ್ಲಿ ಅಪಾರ, ಅರ್ಥ, ಧ್ವನಿ ತುಂಬಿ ಜೀವನವನ್ನು ಕುರಿತು ಗಂಭೀರವಾಗಿ ಬರೆದವರು ಇವರು. ಎಷ್ಟು ತಿಣುಕಿದರೂ ಕವಿತೆ ಅರ್ಥವಾಗಬಾರದು ತನ್ನಲ್ಲಿ ಅಡಗಿರುವ ಧ್ವನಿಯನ್ನು ಅಷ್ಟು ಸರಳದಲ್ಲಿ ಬಿಟ್ಟು ಕೊಡಬಾರದು ಕವಿಗಳು, ಕಥೆಗಾರರನ್ನು ಬಿಟ್ಟು ಮಾತನಾಡುವಂತೆಯೇ ಇಲ್ಲ. ಈ ಬಗೆಯಲ್ಲಿ ಅವರು ಕನ್ನಡ ಸಾಹಿತ್ಯದ ಕವಿತೆ, ಕಥಾ ಚರಿತ್ರೆಯಲ್ಲಿ ಆವರಿಸಿಕೊಂಡು ಬಿಟ್ಟಿದ್ದಾರೆ. ಮಕ್ಕಳು ಶಾಲೆಯಲ್ಲಿ ಕಲಿಯುವ ಪಠ್ಯ ವಿಷಯದಲ್ಲಿ ಇವರ ಕವಿತೆ, ಕತೆಗಳನ್ನು ಇಟ್ಟಿಯೇ ಇರುತ್ತಾರೆ. ಇಷ್ಟೊಂದು ಗಟ್ಟಿಯಾಗಿ ಬರೆದು ತಮ್ಮ ಸ್ಥಾನವನ್ನು ಉಳಿಸಿಕೊಂಡಿರುವ ಇವರು ತಮ್ಮ ಕವಿತೆ, ಕಥಾ ರಚನೆಗೆ ಪ್ರೇರಣೆ ಪಡೆದುದು ಪ್ರಭುದೇವರ ವಚನಗಳಿಂದ. ಇವರು ಕನ್ನಡ ಸಾಹಿತ್ಯದ ಬಗೆಗೆ ಮಾತನಾಡುವಾಗ, ಪ್ರಸ್ತಾವನೆ ಸಲ್ಲಿಸುವಾಗ ಪ್ರಭುದೇವರ ವಚನಗಳನ್ನು ಮೊದಲು ನೆನಪಿಸಿಕೊಳ್ಳುತ್ತಾರೆ. ಪ್ರಭುದೇವರ ವಚನಗಳ ಭಾಷೆ, ಅರ್ಥ, ಧ್ವನಿ ಪರಂಪರೆಯನ್ನು ಕಾವ್ಯದ ಕಟ್ಟುವಿಕೆಯ ಕಲೆಗಾರಿಕೆಯನ್ನು ಒಮ್ಮೆ ಧ್ಯಾನಿಸಿ ಅವರು ತಮ್ಮ ಕವಿತೆ ರಚನೆ ಆರಂಭಿಸಿದ್ದಾರೆ.

ವಿಮರ್ಶಕರು, ಸಹೃದಯರು ಬೇಂದ್ರೆ, ಅಡಿಗರ ಕವಿತೆಗಳನ್ನು ಅರ್ಥಯಿಸಿಕೊಳ್ಳಲು ಹೋದಾಗ ಏನ್ರಿ ಎಷ್ಟು ತಿಣುಕಿದರೂ ಬೇಂದ್ರೆಯವರ ನಾಕು ತಂತಿ ಅರ್ಥವೇ ಆಗುವುದಿಲ್ಲ. ಅವರ ಕವಿತೆ ತುಂಬ್ ತುಂಬ್ ತುಂಬ್ ತುಂಬಿ ಬಂದಿತ್ತ, ಜೋಗಿ ಮುಂತಾದ ಕವಿತೆಗಳನ್ನು ನೋಡಿ ಅವರು ಮಾಂತ್ರಿಕ ಕಣ್ರಿ. ಬಲೆ ಬೆಡಗಿನಲ್ಲಿ ಬರೆಯುತ್ತಾರೆ ಎಂದು ಮಾತನಾಡುತ್ತಾರೆ. ಅಡಿಗರು ನೋಡ್ರಿ ಭಾಷೆಯನ್ನು ಬಳಸುವಾಗ ಅದರ ಭಾಷಾಲಯವನ್ನು ಮುರಿದು, ಅದರ ಬಾಗು ಬಳುಕುಗಳನ್ನು ದಾಟಿ ಅದು ಹೇಗೆ ಧ್ವನಿಯನ್ನೂ ತುಂಬಿ ಅರ್ಥವಾಗದಂತೆ ಬರೆಯುತ್ತಾರೆ ನೋಡಿ. ಭಾಷೆಯನ್ನು ಇವರಿಬ್ಬರು ಬಹಳ ಚೆನ್ನಾಗಿ ಬಳಸಿಕೊಂಡರು ಕಣ್ರಿ ಎಂದು ವಿಮರ್ಶಕರು ಒಂದು ಕ್ಷಣ ಚರ್ಚೆ ಮಾಡುತ್ತಾರೆ. ಈ ಎತ್ತರದಲ್ಲಿ ಬರೆಯುವುದನ್ನು ಇವರು ಕಲಿತುದು ಪ್ರಭುದೇವರ ವಚನಗಳಿಂದ. ಬೆಡಗಿನ ವಚನಗಳು ಎಂದ ಕೂಡಲೆ ಪ್ರಭುದೇವರು ನೆನಪಾಗುತ್ತಾರೆ. ಪ್ರಭುದೇವರ ಎರಡು ವಚನ ಇಲ್ಲಿ ಉದಾಹರಿಸುತ್ತೇನೆ.

೧. ಆಡುತಾಡುತ ಬಂದ ಕೋಡಗ
ಜಪವ ಮಾಡುತ ತಪಸಿಯ ನುಂಗಿತ್ತಲ್ಲಾ.
ಬೇಡ ಬೇಡ ಎಂದಿತ್ತು
ಮುಂದಣ ಕೇರಿಯ ಮೊಲ ಬಂದು
ಮುಂದಣ ಮೊಲನ
ಹಿಂದಣ ಕೋಡಗನ
ಕಂಬಳಿ ನುಂಗಿತ್ತು ಗುಹೇಶ್ವರ.

೨. ಊರ ಮಧ್ಯದ ಕಣ್ಣ ಕಾಡಿನೊಳಗೆ
ಬಿದ್ದೈದಾವೆ ಐದು ಹೆಣ.
ಬಂದು ಬಂದು ಅಳುವರು
ಬಳಗ ಘನವಾದ ಕಾರಣ,
ಹೆಣನೂ ಬೇಯದು
ಕಾಡೂ ನಂದದು.
ಮಾಡ ಉರಿಯಿತ್ತು ಗುಹೇಶ್ವರ.

ಕಟ್ಟಿಕೊಳ್ಳಲು ಹೋದ ಬದುಕು ಮುರಿದು ಬೀಳುವ ಬಗೆಯನ್ನು ಅಂತರಂಗದ ಇಂದ್ರಿಯಗಳ ಉಪಟಳದ ಚಿತ್ರಣವನ್ನು ಪ್ರಭುದೇವರು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಮೊದಲ ವಚನದ ರೂಪಕದಲ್ಲಿರುವ ಕತೆ ಏನು ? ಒಬ್ಬ ತಪಸ್ವಿಗಳು ಕಾಡಿನಲ್ಲಿ ತಪಸ್ಸಿಗೆ ಕುಳಿತುಕೊಂಡರು. ಧ್ಯಾನ, ಸಾಧನೆ ಎಂದು ಸಾಧನೆಗೆ ಪ್ರಯತ್ನಿಸಿದರು. ಆದರೆ ಮನಸ್ಸು ಎನ್ನುವ ಮಂಗವು ಅವರು ತಪಸ್ಸಿಗೆ ಕುಳಿತುಕೊಂಡರೆ ಸಾಕು ಅದು ಮರದ ಮೇಲಿನ ಮಂಗನ ಹಾಗೆ ದಿಕ್ಕು ದಿಕ್ಕಿಗೆ ಹಾರಿಕೊಂಡು ಹೋಗಿ ಬಿಡುತ್ತಿತ್ತು. ಧ್ಯಾನಿಸುವುದು, ಏಕಾಗ್ರತೆ ಹೊಂದುವುದು ಸಾಧ್ಯವಾಗಲೇ ಇಲ್ಲ. ಜೀವಾತ್ಮ ಎನ್ನುವ ಮೊಲನು ಹತ್ತಿರ ಬಂದು ತಾಯಿ ಮಗುವಿಗೆ ಹೇಳುವಂತೆ ಬಹಳ ಹೇಳಿತು. ನಿನ್ನ ಮಂಗನ ಆಟ ಬಿಡು. ಧ್ಯಾನಿಸು, ಸಾಧಿಸು ಎಂದು. ಧ್ಯಾನಿಸುವುದು, ಸಾಧಿಸುವುದು, ಗುರಿ ಮುಟ್ಟುವುದು ಯಶಸ್ಸು ಪಡೆಯುವುದು ಅಷ್ಟು ಸುಲಭವೇ ? ತಪಸ್ವಿಯು ಇಂತಹ ಸಾಧನೆಯಲ್ಲಿರುವಾಗಲೆ ಹಗಲು ಮುಗಿದು ಕತ್ತಲು ಆವರಿಸಿತು. ಎಂತಹ ಹಗಲು ಅದು ? ಆಯುಷ್ಯದ ಹಗಲು ಮುಗಿದು ಸಾವಿನ ಕತ್ತಲು, ಮಾಯೆಯ ಕತ್ತಲು, ಅಜ್ಞಾನದ ಕತ್ತಲು ಆವರಿಸಿಕೊಂಡು ಬಿಟ್ಟಿತು. ಇದು ನಮ್ಮ ಜನ್ಮ ಜನ್ಮದ ಬದುಕು.

ಬೇಂದ್ರೆಯವರ ತುತ್ತಿನ ಚೀಲ ಮುಂತಾದ ಕವಿತೆ, ಹಿಮಗಿರಿಯ ಕಂದರ ಮುಂತಾದ ಕವನಗಳನ್ನು ಬರೆದ ಅಡಿಗರಿಂದ ಹೀಗೆಯೇ ಕವಿತಾ ರಚನೆ ಆರಂಭವಾಯಿತು. ಇಷ್ಟೇ ಅಲ್ಲ ಸ್ವಾತಂತ್ರ್ಯ ಪೂರ್ವದಲ್ಲಿ ಹೊಸಗನ್ನಡ ಸಾಹಿತ್ಯದಲ್ಲಿ ಶಿಶುನಾಳ ಷರೀಫ್‌ರಿಂದ ಡಾ. ಸಿದ್ಧಯ್ಯ ಪುರಾಣಿಕರಿಂದ ಹೀಗೆಯೇ ಕಾವ್ಯ ರಚನೆಯಾಯಿತು. ೧೨ನೇ ಶತಮಾನದಲ್ಲಿ ಬರೆದ ಪ್ರಭುದೇವರ ಇಂತಹ ವಚನಗಳು ೨೦/೨೧ನೇ ಶತಮಾನದಲ್ಲಿಯೂ ಇಷ್ಟೊಂದು ಪ್ರಭಾವಪೂರ್ಣವಾಗಿ ಆವರಿಸಿಕೊಂಡು ಬಿಡುತ್ತವೆ ಎಂದರೆ ಆ ವಚನಗಳ ಕವಿತಾ ಶಕ್ತಿ, ಕಾವ್ಯ ಕೌಶಲ, ಕಲೆಗಾರಿಕೆಯ ಸೌಂದರ್ಯ ಅದೆಷ್ಟಿರಬೇಕು?

ಕೋಡಗ ಎಂದರೆ ಮಂಗ. ಮಂಗ ಬಂದು ತಪಸ್ವಿಯನ್ನು ನುಂಗುವುದಾದರೂ ಹೇಗೆ ? ತಪಸ್ವಿಗಳು ನಿರ್ಜನ ಕಾಡಾರಣ್ಯದಲ್ಲಿ, ಬೆಟ್ಟದ ತಪ್ಪಲಿನಲ್ಲಿ, ಹೊಳೆ ದಂಡೆಯಲ್ಲಿ ತಪಸ್ಸಿಗೆ ಕುಳಿತುಕೊಳ್ಳುವುದೇನೊ ನಿಜ. ಅಲ್ಲಿ ಬೇಕಾದಷ್ಟು ಮಂಗಗಳು ಇರುವುದೂ ನಿಜ. ಅವು ಮರದ ಮೇಲೆ ಆಟವಾಡುತ್ತ, ಜಗಳವಾಡುತ್ತ ಆರ್ಭಟ ಮಾಡುವುದೂ ನಿಜ. ಹಸಿವಿಗಾಗಿ ಮರ, ಗಿಡಗಳನ್ನು ಸೂರೆ ಹೊಡೆಯುವುದೂ ನಿಜ. ಹಸಿವೆಯಾದ ಮಂಗ ಬಂದು ತಪಸ್ವಿಯನ್ನು ನುಂಗುವುದಾದರೂ ಹೇಗೆ ? ಮಂಗ ಸಸ್ಯಾಹಾರಿ. ಅದು ಪುಟ್ಟದು. ಮನುಷ್ಯ ಆಕಾರವೇ ದೊಡ್ಡದು. ಮಂಗ ಮನುಷ್ಯನನ್ನು ನುಂಗಿದಾದರೂ ಹೇಗೆ ? ತಪಸ್ವಿಯನ್ನು ಮಂಗವು ನುಂಗಲು ಬಂದ ಕಾಲಕ್ಕೆ ಸಮೀಪ ಇದ್ದ ಮೊಲ ಓಡಿ ಬಂತು. ಮಂಗನಿಗೆ ಕೇಳಿಕೊಂಡಿತು ಬೇಡ ಬೇಡ. ಇವರು ನಿರುಪದ್ರವಿ ತಪಸ್ವಿಗಳು. ಯಾರಿಗೂ ಕೆಡುಕು ಮಾಡುವವರಲ್ಲ. ಜಗತ್ತಿಗೆ ಲೋಕೋಪಕಾರಿ ಇವರು. ತಾನೂ ಉದ್ಧಾರವಾಗಿ ಜಗತ್ತನ್ನು ಉದ್ಧರಿಸುವ ಸಂಕಲ್ಪದಲ್ಲಿ ತಪಸ್ಸಿಗೆ ಕುಳಿತಿದ್ದಾರೆ. ಅವರ ತಪಸ್ಸಿಗೆ ಲೋಕಹಿತದ, ಜನಹಿತದ ಉದ್ದೇಶವಿದೆ ಎಂದು ಮೊಲ ಬಂದು ಮಂಗನನ್ನು ಕೇಳಿತು. ಮೊಲಕ್ಕೆ ಮಾತು ಬರುತ್ತಾ ? ಮಂಗ ಉತ್ತರ ಕೊಡುತ್ತದೆ ? ಇಲ್ಲ, ಅವು ವಾಸ್ತವದಲ್ಲಿ ಮಾತನಾಡುವುದಿಲ್ಲ. ಆದರೆ ಕಾವ್ಯ ಸತ್ಯದಲ್ಲಿ ಮಾತನಾಡುತ್ತವೆ. ಅದನ್ನು ಪ್ರಭುದೇವರು ತಮ್ಮ ವಚನದಲ್ಲಿ ಸಾಧ್ಯ ಮಾಡಿ ತೋರಿಸಿದ್ದಾರೆ. ಯಾವುದು ಅಸಾಧ್ಯವೋ ಅದನ್ನು ಕವಿಯು, ಕವಿತೆಯಲ್ಲಿ ಸಾಧ್ಯ ಮಾಡಿ ತೋರಿಸುತ್ತಾರೆ. ಇದನ್ನೆ ರವಿ ಕಾಣದ್ದನ್ನು ಕವಿ ಕಂಡ ಎನ್ನುವುದು. ಅಡಿಗರು ಕವಿತೆಯಲ್ಲಿ ಒಂದು ಕಡೆ ಬರೆಯುತ್ತಾರೆ. ಜಾಮೂನು ನಾದದಲಿ ತೇಲಿಸಿದಳು ಎಂದು. ಚುನಾವಣೆಗೆ ಜನರು ಓಟು ಹಾಕುವಾಗ ಎಲ್ಲರೂ ೭೦ರ ದಶಕದಲ್ಲಿ ಒಂದೇ ಪಕ್ಷಕ್ಕೆ ಮತ ಒತ್ತಿ ಬಿಟ್ಟರು. ಜನರು ಆ ಚುನಾವಣಾ ಭಾಷಣದ ಮೋಡಿಯಲ್ಲಿ ತೇಲಿಹೋದರು. ಆ ಮಟ್ಟಿಗೆ ಇಂದಿರಾ ಗಾಂಧಿಯವರ ಭಾಷಣದ ನಾದಕ್ಕೆ ಇಡಿ ಭಾರತ ಮೋಡಿಗೊಳಗಾಯಿತು. ಜಾಮೂನು ಸಿಹಿಯಾಗಿದೆ. ಅದಕ್ಕೆ ನಾದ ಇದೆಯೇ? ಇಲ್ಲ. ಆದರೆ ಇಂದಿರಾ ಗಾಂಧಿಯವರು ಭಾಷಣ ಮಾಡಿದರು. ಅವರೇನು ಜನರ ಮನಸ್ಸನ್ನೆಲ್ಲ ಹಿಪ್ನಾಟೈಸ್ ಮಾಡಿದರೆ ? ಮೋಡಿ ಮಾಡಿದರೆ ? ಏನಾದರೂ ಪವಾಡ ಮಾಡಿದರೆ ? ಏನೂ ಇಲ್ಲ. ಇಂದಿರಾ ಗಾಂಧಿಯವರೆ ಆಗ ಆಧುನಿಕ ಭಾರತದ ಒಂದು ದೊಡ್ಡ ಮಾಯೆ. ತಮ್ಮ ಮಾಯಾಜಾಲವನ್ನೆಲ್ಲ ಬೀಸಿ ಜನರನ್ನು ೧೬ ವರೆ ವರ್ಷ ತಮ್ಮ ವಶದಲ್ಲಿರಿಸಿಕೊಂಡು ಭಾರತ ಆಳಿದ್ದು ನಿಜ. ಅಡಿಗರು ಹೀಗೆ ಬರೆಯಲು ಕಲಿತುದು ಪ್ರಭುದೇವರು ಬರೆದ ಇಂತಹ ಅನೇಕ ವಚನಗಳಿಂದ. ಬೇಂದ್ರೆ, ಷರೀಫ್‌ರು ತಮ್ಮ ಕವಿತೆಯ ರಚನೆಯಿಂದ ಹಾಡುಗಾರಿಕೆ ಲಯದಿಂದ ಜನರನ್ನು ಕುಣಿಸಿಬಿಡುತ್ತಾರೆ. ಇವರು ಕಲಿತುದು ಪ್ರಭುದೇವರ ಅನೇಕ ವಚನಗಳಿಂದ.

ಮನಸ್ಸನ್ನು ಕೋಡಗ ಎಂದು ಕರೆದವರು ಬಹಳ. ಆದರೆ ಮನಸ್ಸು ಮಂಗವಾಗಿ ಮೊಲದ ಜೊತೆ ಮಾತನಾಡಿದ್ದನ್ನು ಬರೆದವರು ಯಾರೂ ಇಲ್ಲ. ಪಂಚತಂತ್ರದ ಕಥೆಗಳಲ್ಲಿ ಮಂಗ, ಮೊಸಳೆ, ಹಾವು, ಇಲಿ, ಹದ್ದು, ಕಾಗೆ, ಹಸು, ಸಿಂಹಗಳೆಲ್ಲ ಪರಸ್ಪರ ಮಾತನಾಡುತ್ತವೆ. ಪಂಚತಂತ್ರದ ಕಥೆಗಳಿರುವುದೆ ಮಕ್ಕಳಿಗಾಗಿ ಎನ್ನುತ್ತೇವೆ. ಮಕ್ಕಳನ್ನು ಎದುರಿಗೆ ಕೂರಿಸಿಕೊಂಡು ಕಥೆ ಹೇಳುವ ಮೂಲಕ ದೊಡ್ಡವರಿಗೂ ಪಾಠ ಹೇಳುತ್ತವೆ ಅವು. ಪಂಚತಂತ್ರದ ಕಥೆಗಳ ಕಲೆಗಾರಿಕೆ, ಬೌದ್ಧ, ಜೈನ್ ಧರ್ಮದ ಗುರುಗಳು ಹೇಳುವ ಕಥೆಗಾರಿಕೆ, ವಡ್ಡಾರಾಧನೆಯ ಕಥೆಯ ಕಲೆಗಾರಿಕೆ ಪ್ರಭುದೇವರ ವಚನಗಳಲ್ಲಿದೆ. ಬೌದ್ಧ, ಜೈನ ಧರ್ಮದ ಕಥೆಗಳು ಓದುಗರನ್ನು, ಸಹೃದಯರನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿಬಿಡುತ್ತವೆ. ನಾವು ಅವರ ಮುಷ್ಠಿಯಲ್ಲಿ ಬಂಧಿಗಳಾಗಿ ಬಿಡುತ್ತೇವೆ. ಆ ಕತೆಗಳಾದರೋ ಒಮ್ಮೆ ಈ ಕಥೆಗಳನ್ನೆಲ್ಲ ಓದಿ ಬಿಡಬೇಕು ಎಂದು ನಮ್ಮನ್ನು ಕೂಡಿಸಿ ಓದಿಸಿ ಬಿಡುತ್ತವೆ. ಈ ಕಥನ ಕೌಶಲ, ಕಲೆಗಾರಿಕೆ ಪ್ರಭುದೇವರ ವಚನಗಳಲ್ಲಿದೆ. ಗದ್ಯದಲ್ಲಿ ಬರೆದರೆ ಎರಡೂವರೆ ಸಾಲು. ಈ ಪುಟ್ಟ ವಚನದಲ್ಲಿ ನಾಲ್ಕು ಐದು ಕಥೆಗಳಿರುತ್ತವೆ. ಅದೆಷ್ಟು ಕಥೆಗಳನ್ನು ಅಲ್ಲಿ ಸಮೃದ್ಧವಾಗಿ ಇಡಿಕಿರಿದು ಇರಿಸಿಬಿಟ್ಟಿರುತ್ತಾರೆ ಎಂದರೆ ಅವರ ವಚನ ಲೋಕದಲ್ಲಿ ನಾವು ಸಂಭ್ರಮಿಸಿ ಅಲ್ಲಿಯೇ ನಿಮಗ್ನರಾಗಿ ಬಿಡುತ್ತೇವೆ. ಕೇವಲ ಮಗ್ನರಾಗುವುದಲ್ಲ. ಬದುಕನ್ನು ಕುರಿತು ಗಂಭೀರವಾಗಿ ಯೋಚಿಸುವಂತೆ ಮಾಡಿ ನಮ್ಮನ್ನು ದಿಕ್ಕೆಡಿಸಿ ಬಿಡುತ್ತಾರೆ. ಬದುಕು ಎಂದರೆ ಏನು ? ಮಂಗಕ್ಕೆ ಮೊಲ ಹೇಳಿತು. ತಪಸ್ವಿಯನ್ನು ನುಂಗಬೇಡ ಎಂದು. ಆದರೆ ಈ ಮೊಲವು ನೋಡ ನೋಡುತ್ತಿದ್ದಂತೆಯೇ ತಪಸ್ವಿಯನ್ನು ಮಂಗವು ನುಂಗೇ ಬಿಟ್ಟಿತು. ಆಮೇಲೇನಾಯಿತು ಗೊತ್ತ ? ಮೊಲ ಮತ್ತು ತಪಸ್ವಿಯನ್ನು ನುಂಗಿದ ಮಂಗವನ್ನು ಕಂಬಳಿ ನುಂಗಿ ಬಿಟ್ಟಿತು. ವಿಚಿತ್ರವಾಗಿದೆ ಕಥೆ. ಕಂಬಳಿ ಎಲ್ಲಿತ್ತು ? ಕಂಬಳಿಗೇನು ಹೊಟ್ಟೆ ಇದೆಯೇ ? ಕೈಕಾಲುಗಳಿವೆಯೇ ? ಅದು ನಡೆದುಕೊಂಡು ಬರುತ್ತದೆಯೇ ? ಅನು ನುಂಗುತ್ತದೆಯೆ ? ಇದೆಲ್ಲ ಆಗದ ಹೋಗದ ಮಾತು. ಕಾಗಕ್ಕ, ಗುಬ್ಬಕ್ಕ ಕಥೆ ಇದ್ದ ಹಾಗೆ ಇದೆ ಬಿಡ್ರಿ ಎಂದು ನೀವು ಹೇಳಬಹುದು. ಹಾಗಿದ್ದರೆ ಅಡಿಗರು, ಬೇಂದ್ರೆಯವರು, ಅನಂತಮೂರ್ತಿ, ಷರೀಫ್‌ರಂತಹವರು ಈ ಪರಿ ಪ್ರಭುದೇವರ ವಚನಗಳ ರಚನೆಯ ಮಾಯೆಗೆ ಸಿಕ್ಕಿ ಬಿದ್ದರಲ್ಲ ಅದು ಯಾಕೆ ? ಮುಂದಣ ಮೊಲನ ಹಿಂದಣ ಕೋಡಗನ ಕಂಬಳಿ ನುಂಗಿತ್ತು. ತಡಿರಿ. ಎಲ್ಲೋ ಕೇಳಿದ ಹಾಗೆ ಇದೆ. ಹೌದಲ್ಲಿ. ಷರೀಫ್‌ರ ಒಂದು ಹಾಡು ಇದೆ.

**ಕೋಡಗನ ಕೋಳಿ ನುಂಗಿತ್ತ**
**ಕೇಳವ್ವ ತಂಗಿ ಕೋಡಗನ ಕೋಳಿ ನುಂಗಿತ್ತ.**

ಇದೇ ಪ್ರಭುದೇವರು ಹೇಳಿದ ಕಥೆಯನ್ನು ಹಳ್ಳಿ ಹಳ್ಳಿಯಲ್ಲಿ ಷರೀಫ್‌ರು ಹೆಣ್ಣು ಮಕ್ಕಳನ್ನು ಕೂಡಿಸಿಕೊಂಡು ಕಥೆ ಹೇಳಲು ಶುರುವಿಟ್ಟುಕೊಂಡಿದ್ದು ನೆನಪಾಗುತ್ತದೆ. ಹೌದು. ಷರೀಫ್‌ರ ಈ ಹಾಡು ನೇರವಾಗಿ ಪ್ರಭುದೇವರ ವಚನವೆ. ಅವರ ಪ್ರಭಾವವೆ. ಶಿಶುವಿನಾಳ ಷರೀಫ್‌ರು ಪ್ರಭುಲಿಂಗ ಲೀಲೆಯನ್ನು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಹಳ್ಳಿ ಹಳ್ಳಿಯಲ್ಲಿ ಪ್ರಭುದೇವರ ಪ್ರವಚನ ಮಾಡುತ್ತಿದ್ದರು. ಪ್ರಭುದೇವರ ಜಾತ್ರೆಗೆ ಜನರನ್ನು ಯಾತ್ರೆ ಕರೆದುಕೊಂಡು ಹೋಗುತ್ತಿದ್ದರು. ಪ್ರಭುದೇವರ ಮೇಲೆ ೨೧ ಹಾಡುಗಳನ್ನು ಬರೆದಿದ್ದಾರೆ ಅವರು. ಇದು ಪ್ರಭುದೇವರ ವಚನಗಳ ಪ್ರಭಾವ. ಕರ್ನಾಟಕದಲ್ಲಿ ಮಹಾರಾಷ್ಟ್ರದಲ್ಲಿ, ತಮಿಳುನಾಡಿನಲ್ಲಿ ಒಟ್ಟು ೪೫೫ ಪ್ರಭುದೇವರ ದೇವಾಲಯಗಳಿವೆ. ಲೆಕ್ಕವಿಲ್ಲದಷ್ಟು ವೀರಶೈವ ಮಠಗಳಿಗೆಲ್ಲ ಪ್ರಭುದೇವರೆ ಗುರುಗಳು. ಮೂಲ ಕರ್ತೃಗದ್ದುಗೆ ಪ್ರಭುದೇವರ ಗುರುತ್ವವನ್ನು ಒಪ್ಪಿಕೊಂಡೆ ಹುಟ್ಟಿದ್ದು.

ಸಾಮಾನ್ಯವಾಗಿ ಧರ್ಮಗುರುಗಳು ಎಂದರೆ ಉಪದೇಶ ಮಾಡುತ್ತಾರೆ. ನೀತಿ ಹೇಳುತ್ತಾರೆ ಎಂದು ಬುದ್ಧಿಜೀವಿಗಳು, ಯುವಕರು, ಲೌಕಿಕರು ಅನ್ನುವುದುಂಟು. ಇಲ್ಲಿ ಪ್ರಭುದೇವರ ವಚನಗಳಲ್ಲಿ ಅದೇನು ಇಲ್ಲ. ಅವರು ಇಲ್ಲಿ ಹೇಳುತ್ತಿರುವುದೇನು ? ಅಯ್ಯಾ ನಿನ್ನ ಯೋಗ್ಯತೆ ಇಷ್ಟೆ ? ನೀನು ಏನು ಇದ್ದೀಯ ನಿನ್ನ ಮುಖವನ್ನು ಕನ್ನಡಿಯಲ್ಲಿ ಒಮ್ಮೆ ನೋಡಿಕೊ. ನಾನು ಚೆಂದ ಇದ್ದೇನೆ ಎಂದು ಕೂದಲು ಬಾಚಿ, ಮುಖಕ್ಕೊಂದಿಷ್ಟು ಲೇಪನ ಮಾಡಿಕೊಂಡು ಮುಖವನ್ನೊಮ್ಮೆ

* ಜೋಗದ ಪರಮಗುರು ಪ್ರಭುದೇವ ಧರ್ಮಪೀಠ, ಮಾವಿನಗುಂಡಿ ಅಂಚೆ, ಸಿದ್ಧಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ-೫೮೧ ೩೫೫

ನೋಡಿಕೊಳ್ಳುವಿಯೇನೊ ? ಪ್ರಭುದೇವರು ತಮ್ಮ ವಚನಗಳಲ್ಲಿ ಮೆಟಾಫಿಸಿಕ್ ಹೇಳುತ್ತಿದ್ದಾರೆ. ಅಯ್ಯಾ ಮನುಷ್ಯನೆ ನಿನ್ನ ಯೋಗ್ಯತೆ ಇಷ್ಟೆ ಇದೆ. ನಿನ್ನಿಂದ ಕಾನ್ಸಂಟ್ರೇಷನ್ ಸಾಧ್ಯವೇ ? ಸಾಧನೆ, ಸತತ ಪ್ರಯತ್ನಕ್ಕೆ ನೀನು ಸಿದ್ದನಿದ್ದೀಯ ? ಹುತ್ತಗಟ್ಟದೆ ಚಿತ್ತ ಕೆತ್ತೀತೆ ? ಎನ್ನುತ್ತಾರೆ ಕವಿ ಅಡಿಗರು ? ಚಿತ್ತ ಹುತ್ತಗಟ್ಟದಿದ್ದರೆ ಕಾವ್ಯ ನಿರ್ಮಿತಿ ಆಗುವುದಿಲ್ಲ. ಸಿಕ್ಸರ್, ಬೌಂಡರಿ ಬರಬೇಕಾದರೆ ಮೊದಲು ಆ ಆಟದ ಎಲ್ಲ ವಿದ್ಯಮಾನವನ್ನು ಅರಿತಿರಬೇಕು. ರಟ್ಟೆಯ ಜೊತೆಗೆ ದೇಹದ ಬಲವೂ ಬೇಕು, ಮನಸ್ಸಿನ ಅರಿವೂ ಬೇಕು. ಚಾಕಚಕ್ಯತೆಯ ಹೊಡೆತವೂ ಬೇಕು. ಎಸೆದವನ ಶಕ್ತಿಯ ಮಿತಿ ಅರಿತು ದಂಡಿಗ ಬೀಸಿ ಹೊಡೆಯಬೇಕು. ಆಗ ಸಿಕ್ಸರ್, ಬೌಂಡರಿ. ಅದು ಕೇವಲ ಲೆಕ್ಕಾಚಾರವಲ್ಲ ಬದುಕು. ಈ ಬದುಕು ಒಂದು ವಿಸ್ಮಯದ, ಆಕಸ್ಮಿಕದ ಜಗತ್ತು. ಯಾವ ಶಕ್ತಿ ಎಲ್ಲಿ ಪ್ರಕಟವಾಗುವುದೋ ತಿಳಿಯದು. ಅರಿವು ಮಾತ್ರ ಸದಾ ಜಾಗೃತ ಇರಬೇಕು. ಅಲ್ಲಿ ಅಪಾರ ತನ್ಮಯತೆ, ಸಾಧನೆ, ಪ್ರಯತ್ನ ಬೇಕು. ಒಂದು ಪುಸ್ತಕ ಹಿಡಿದು ನಾಕು ತಾಸಲ್ಲ ಹತ್ತು ಗಂಟೆ ಓದಿದರೂ ಹಸಿವು ಹಿಂಗಿರಬಾರದು. ಅರಿವನ ಹಂಬಲ ಅಂತರಂಗದಲ್ಲಿ ಅಪಾರ ಇರಬೇಕು. ಓದಲಾರದವನು ರ್‍ಯಾಂಕ್ ಬರುವುದಾದರೂ ಹೇಗೆ ? ಬದುಕನ್ನು ಕುರಿತು ಧ್ಯಾನಿಸದವನು ಜೀವನವನ್ನು ದಾಟುವುದಾದರೂ ಹೇಗೆ ?

ಎರಡನೆಯ ವಚನ ರಂಗದ ಮೇಲೆ ನಾಟಕಕಾರ ದುರಂತವನ್ನು ತರುವ ಹಾಗಿಲ್ಲ ಎನ್ನುವ ನಿಯಮವನ್ನು ಮುರಿದು ಷೇಕ್ಸಪಿಯರ್ ದುರಂತವನ್ನು ರಂಗದ ಮೇಲೆ ತಂದ. ಹಾಗೆ ಗುರುಗಳು ಮುರಿದು ಬಿದ್ದ ಬದುಕನ್ನು ಕುರಿತು ಹೇಳಬಾರದು. ಅವರು ಸುಂದರ ಕಥೆಗಳನ್ನೆ ಹೇಳಬೇಕು ಎಂದು ತಿಳಿದ ಕಾಲದಲ್ಲಿ ತಮ್ಮ ಸಮಕಾಲೀನದಲ್ಲಿ ಮೇಲಿಂದ ಮೇಲೆ ನಡೆಯುವ ರಾಜಮಹಾರಾಜರ ರಾಜ್ಯದ ಆಸೆಗೆ ನಡೆಯುವ ಯುದ್ಧದಲ್ಲಿ ಸಾಮಾನ್ಯ ಜನರ ಬದುಕು ಮುರಿದು ಬಿದ್ದು ಮನೆಮನೆ ದುರಂತವಾಗಿರುವುದನ್ನು ಪ್ರಭುದೇವರು ನಿತ್ಯ ಎಲ್ಲ ಊರುಗಳಲ್ಲಿ ನೋಡಿದರು. ಎಲಿಯಟ್ ಎರಡನೇ ಮಹಾಯುದ್ಧ ಪರಿಣಾಮವನ್ನು ವೇಸ್ಟ್ ಲ್ಯಾಂಡ್ ನೀಳ್ಗವಿತೆಯಲ್ಲಿ ತಂದಂತೆ ಪ್ರಭುದೇವರ ಈ ಪುಟ್ಟ ವಚನದಲ್ಲಿ ಅದನ್ನು ತಂದಿದ್ದಾರೆ. ಹೀಗೆ ಕನಸುಗಳು ಇಲ್ಲವಾದ ದುರಂತಮಯ ಬದುಕಿನ ಗೋಳನ್ನು ಅಡಿಗರೂ ತಮ್ಮ ಕಾವ್ಯದಲ್ಲಿ ತಂದರು. ಅವರಿಗೆ ಹೂವುಗಳ ಮೇಲೆ ಕವಿತೆ ಬರೆಯಲಾಗಲಿಲ್ಲ. ಹಾಗೆ ಪ್ರಭುದೇವರು ತಮ್ಮ ಅನೇಕ ವಚನಗಳಲ್ಲಿ ಮುರಿದು ಹೋದ ಬದುಕಿನ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ವಚನದ ಆರಂಭವಾಗುವುದೆ ಊರೆನ್ನುವ ಕಾಡಿನಲ್ಲಿ ಐದು ಹೆಣಗಳು ಬಿದ್ದಿವೆಯಂತೆ. ಅಲ್ಲಿ ಬಂಧು ಬಳಗಗಳು ಬಂದು ಬಂದು ಅಳುತ್ತಿದ್ದಾರೆ. ಈ ಕಂಬನಿ ಶೋಕ ಎಷ್ಟಿದೆ ಎಂದರೆ ಅದು ಮುಗಿಯದ ಕಥೆ. ಯುದ್ಧಕಾರಣವಾಗಿ ಮನೆ ಮನೆಯಲ್ಲೂ ಸಾವಿರಬೇಕಾದರೆ ಆ ದುಃಖ ಎಂದಿಗೆ ಮುಗಿಯಬೇಕು. ಈ ರೂಪಕವನ್ನು ಸಾಧನೆಗೆ ಆತ್ಮ ಸಾಕ್ಷಾತ್ಕಾರಕ್ಕೆ ಸಾಧನೆಗೆ ತೊಡಗಿಕೊಂಡ ಸಾಧಕನ ಅಂತರಂಗಕ್ಕೆ ಅಲಿಗರಿಯಾಗಿ ಪ್ರಭುದೇವರು ಕಟ್ಟಿಕೊಡುತ್ತಾರೆ.

ಅಂತರಂಗವೇ ಹಾಳುಬಿದ್ದ ಸ್ಮಶಾನವಾಗಿದೆ. ಇನ್ನು ಯಾವ ಕಾಲಕ್ಕೆ ಅಲ್ಲಿ ಆನಂದದ ಅರಿವು, ಸಂತೋಷಗಳು ದೊರೆಯುವುದು. ಸಾಧಕನ ಅಂತರಂಗದಲ್ಲಿ ಅರಿವಿನ ಉದಯವಾಗದೆ ಹೋದರೆ ಸಾಧನೆಯೂ ಇಲ್ಲ. ಬೆಳಕೂ ಇಲ್ಲ. ಹೀಗೆ ಪ್ರಭುದೇವರು ತಮ್ಮ ಸಮಕಾಲೀನವಾದ ಯುದ್ಧ ದುರಂತವನ್ನು ಕಟ್ಟಿಕೊಡುತ್ತಲೆ ಮನುಷ್ಯನ ಅನುಭಾವ ಸಾಧನೆಯು ಶೂನ್ಯವಾದಾಗಿನ ಬದುಕನ್ನು ವಿವರಿಸಿದ್ದಾರೆ.

ಪ್ರಭುದೇವರ ಯಾವ ವಚನಗಳನ್ನಾದರೂ ನೋಡಿರಿ ಅವು ಪುಟ್ಟ ಪುಟ್ಟ ಕವಿತೆಗಳು, ಕವನಗಳು, ಕಾವ್ಯಗಳು. ಅವರ ಕವಿತೆಯ ರಚನೆಯಲ್ಲಿ ಅದೆಷ್ಟು ಬಗೆಯ ಕಥೆಗಳಿವೆ. ಕಥೆಗಳ ವೈವಿಧ್ಯವಂತೂ ಲೆಕ್ಕವಿಲ್ಲ. ಲೇಖಕರೆಲ್ಲ ಮತ್ತೆ ಮತ್ತೆ ಪ್ರಭುದೇವರ ವಚನಗಳನ್ನು ಓದುತ್ತಾರೆ. ಬದುಕನ್ನು ಕುರಿತು ಪ್ರಭುದೇವರು ಧ್ಯಾನಿಸಿದ ಪರಿಯನ್ನು ಕಂಡು ಬೆರಗಾಗುತ್ತಾರೆ. ಪ್ರಭುದೇವರ ಧ್ಯಾನದಲ್ಲಿ ಬುದ್ಧ ಹಾದು ಹೋಗುತ್ತಾನೆ. ಮಹಾವೀರ ಹಾದು ಹೋಗುತ್ತಾನೆ. ಇಷ್ಟೇ ಯಾಕೆ ಕಾರ್ಲಮಾರ್ಕ್ಸ್, ಗಾಂಧೀಜಿ ಮುಂತಾದವರ ಬದುಕಿನ ಒಳನೋಟಗಳು ಹನ್ನೆರಡನೇ ಶತಮಾನದಲ್ಲಿ ಪ್ರಭುದೇವರ ವಚನಗಳಲ್ಲಿಯೇ ಅಭಿವ್ಯಕ್ತವಾಗಿವೆ. ಅವನ್ನು ಓದುವ ಧ್ಯಾನಿಸುವ ಸಂಯಮಬೇಕು ಅಷ್ಟೇ.

ತಮ್ಮ ವಚನಗಳಲ್ಲಿ ಪ್ರಭುದೇವರು ಮತ್ತೆ ಮತ್ತೆ ಧ್ಯಾನಿಸಿದ್ದು, ಚಿಂತಿಸಿದ್ದು ಅನುಭಾವ ಜಗತ್ತನ್ನು. ಈ ದೇಹ, ಇಂದ್ರಿಯ, ಮನಸ್ಸು, ಈ ಜೀವನ ಜಗತ್ತು ಇವುಗಳ ಮಾಯಾ ಜಾಲವನ್ನು ಒಂದಿಷ್ಟು ವಾಂಛೆ, ಇಚ್ಛೆ, ರೋಷ, ದ್ವೇಷ ಈ ಜಗತ್ತಿನ ಜೀವಜಾಲವನ್ನು ಅದೆಲ್ಲಿಗೆ ಕರೆದುಕೊಂಡು ಹೋಗಿ ಮುಟ್ಟಿಸುತ್ತದೆ ? ಎಲಾ ಎಲಾ ?! ನೀಡು ಬಾಳಿನ ಹಗಲು, ರಾತ್ರಿಗಳ ಜೀವನವೇ ? ಈ ಜೀವನವನ್ನು ಸುಂದರ ಮಾಡಿಕೊಳ್ಳಲು ಅವರು ಮೊದಲು ಆರಂಭಿಸಿದ್ದು ಯೋಗ ಜೀವನವನ್ನು. ಈ ದೇಹವನ್ನೆ ತುಂಬ ಸುಂದರವಾದ ತೋಟವನ್ನಾಗಿ ಮಾಡಿಕೊಂಡು ಸಮೃದ್ಧವಾದ ಬೆಳೆ ತೆಗೆದು ಜೀವನವನ್ನು ಸಂತೋಷಿಸಬೇಕು. ಆನಂದಿಸಬೇಕು ಎಂಬುದನ್ನು ಕಲಿತು ಕೊಂಡವರು. ಅವರ ಯೋಗದ ಈ ವಚನವನ್ನು ಗಮನಿಸಿರಿ.

**ತನುವ ತೋಂಟವ ಮಾಡಿ**
**ಮನವ ಗುದ್ದಲಿ ಮಾಡಿ**
**ಅಗೆದು ಕಳೆದೆನಯ್ಯ ಭ್ರಾಂತಿನ ಬೇರ,**
**ಒಡೆದು ಸಂಸಾರ ಹೆಂಟೆಯ,**
**ಬಗಿದು ಬಿತ್ತಿದೆನಯ್ಯಾ ಬ್ರಹ್ಮಬೀಜವ.**
**ಅಖಂಡ ಮಂಡಲವೆಂಬ ಬಾವಿ**
**ಪವನವೇ ರಾಟಾಳ.**
**ಸುಷುಮ್ನನಾಳದಿಂದುಕುವ ತಿದ್ದಿ**
**ಬಸವಗಳೈವರು ಹಸನುಗೆಡಿಸಿಹರೆಂದು**
**ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ**
**ಯಾವಾಗಲೂ ತೋಂಟದಲಿ ಜಾಗರವಿದ್ದು**
**ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ.**

ಇಂದು ಯೋಗ, ಕೃಷಿ ಮತ್ತು ಧ್ಯಾನ ಪ್ರಯತ್ನಶೀಲತೆ ನಮ್ಮ ಬದುಕನ್ನು ಆವರಿಸಿಕೊಂಡಿದೆ. ಇವಿಲ್ಲದೆ ನಮ್ಮ ಜೀವನವಿಲ್ಲ. ಮನುಷ್ಯನಿಗೆ ದೇಹ, ಇಂದ್ರಿಯ, ಮನಸ್ಸಿನ ಆರೋಗ್ಯ ಅತ್ಯಂತ ಮುಖ್ಯವಾಗಿದೆ. ಸೌಂಡ್ ಮೈಂಡ್ ಇನ್ ಎ ಸೌಂಡ್ ಬಾಡಿ. ಇಂದು ಪ್ರಪಂಚದ ಎಲ್ಲ ಮನುಷ್ಯರು ಅಪೇಕ್ಷೆಪಡುವುದು ಸುಂದರ ನೆಮ್ಮದಿಯ ಜೀವನವನ್ನು. ಅದಕ್ಕಾಗಿ ಇಂದು ಪ್ರಪಂಚದ ಜನರೆಲ್ಲ ಯೋಗ ಜೀವನವನ್ನು ನಡೆಸಿದ್ದಾರೆ. ಇದರಿಂದ ನಮ್ಮ ಜೀವನದ ನೂರಕ್ಕೆ ತೊಂಬತ್ತು ಸಮಸ್ಯೆಗಳು ಹೋಗಿಬಿಡುತ್ತವೆ. ನಮ್ಮ ಜೀವನವು ಸುಖ, ಸಂತೋಷ, ಸಮೃದ್ಧಿಯ ಜೀವನವಾಗಬೇಕಿದೆ. ಅದು ಸತತ ಪ್ರಯತ್ನದಿಂದ ಮಾತ್ರ ಸಾಧ್ಯ. ಎಲ್ಲರ ಸಹಕಾರದಿಂದ ಮಾತ್ರ ಸಾಧ್ಯ. ಪ್ರಭುದೇವರು ಈ ವಚನದಲ್ಲಿ ಬೇಸಾಯ ಮಾಡುವ ರೈತ ಗೊಗ್ಗಯ್ಯನಿಗೆ ಭೂಮಿಯ ಕೃಷಿಯ ಜೊತೆಗೆ ದೇಹ, ಮನಸ್ಸು, ಇಂದ್ರಿಯಗಳ ಕೃಷಿ ಮಾಡುವ ಅವಶ್ಯಕತೆಯನ್ನು ಮನಗಾಣಿಸಿದ್ದಾರೆ. ಧ್ಯಾನ ಒಬ್ಬ ವಿದ್ಯಾರ್ಥಿಗೂ ಬೇಕು. ಒಬ್ಬ ಉದ್ಯೋಗಸ್ಥನಿಗೂ ಬೇಕು. ಸಂಸಾರ ಮಾಡುವ ಲೌಕಿಕರಿಗೂ ಬೇಕು. ಉದ್ಯಮ ನಡೆಸುವ ಉದ್ಯಮಿಗೂ ಬೇಕು. ವಿಜ್ಞಾನ, ಗಗನಯಾತ್ರಿಗೂ ಬೇಕು. ಅಧ್ಯಾಪಕ, ವಿದ್ಯಾರ್ಥಿಗೂ ಬೇಕು. ಆಡಳಿತ ನಡೆಸುವ ರಾಜತಾಂತ್ರಿಕರಿಗೂ ಬೇಕು. ರಾಜಕಾರಣಿಗಳಿಗೂ ಬೇಕು. ಪ್ರಭುದೇವರ ಜಯಂತಿಯನ್ನು ಇಂದಿನ ನಮ್ಮ ಜೀವನಾವಶ್ಯಕತೆಯ ಸಂದರ್ಭದಲ್ಲಿ ಸ್ಮರಿಸಿಕೊಳ್ಳುವುದು ಹೀಗೆ ಎಂದು ನಾವಾದರೂ ತಿಳಿದುಕೊಂಡಿದ್ದೇವೆ.







# ಮಾನವ ಕಲ್ಯಾಣಕ್ಕೆ ಶರಣರ ಸಪ್ತಸೂತ್ರಗಳು

- ಬಿ.ಆರ್. ನಾಗರತ್ನ *

ಎಂಟುನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ನಡೆದ ಶರಣರ ಆಂದೋಲನ ಕೇವಲ ಧಾರ್ಮಿಕ ಸುಧಾರಣೆಗಳಿಗಷ್ಟೇ ಸೀಮಿತವಲ್ಲ. ಇದು ಅಂದಿನ ಅನೇಕ ಗಂಭೀರ ಪ್ರಚಲಿತ ಸಮಸ್ಯೆಗಳಿಗೆ ಪರಿಣಾಮಕಾರಿಯಾಗಿ ಸ್ಪಂದಿಸಿತು. ಮನುಷ್ಯನು ಸ್ವೀಕರಿಸಬೇಕಾದ ಜೀವನದ ಉದ್ದೇಶ ಮತ್ತು ಅನುಸರಿಸಬೇಕಾದ ಪಥವನ್ನು ಶರಣರು ತಮ್ಮ ಅನುಭಾವಿಕ ನೆಲೆಯಲ್ಲಿ ವಚನಗಳ ಮೂಲಕ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ತಮ್ಮ ನಡೆಯ ಮೂಲಕ ತನುಮನದ ಮೈಲಿಗೆಯನ್ನು ತೊಳೆದುಕೊಂಡು ಶುದ್ಧ ನಿರ್ಮಲೀಕರಣದ ಹಾದಿಯನ್ನು ತಮ್ಮ ನುಡಿಗಳ ಮೂಲಕ ತೋರಿದ್ದಾರೆ. ಪ್ರಸಾದ ಮಲತ್ರಯಗಳನ್ನು ಹೋಗಲಾಡಿಸಿಕೊಂಡು ಪರಿಶುದ್ಧವಾಗಿರಿಸಿ ಕಾಯವನ್ನು ಮತ್ತು ಮನಸ್ಸನ್ನು ಹೇಗೆ ಕೊಳ್ಳಬೇಕು ಎಂಬುದನ್ನು ಅವರು ತಮ್ಮ ಜೀವನದ ಮೂಲಕ ಕಾಣಿಸಿದ್ದಾರೆ.

ಶಿವಶರಣರ ವಚನಗಳನ್ನು ವಿಶ್ಲೇಷಿಸಿದರೆ, ಮತ್ತು ಶರಣರು ನಡೆಸಿದ ಜೀವನಕ್ರಮವನ್ನು ಪರಿವೀಕ್ಷಿಸಿದರೆ ಅಂತರಂಗ ಮತ್ತು ಬಹಿರಂಗದ ಶುದ್ಧಿಯನ್ನು ಸಾಧಿಸುವುದು ಹೇಗೆ ಎಂಬುದು ನಮಗೇ ಮನವರಿಕೆಯಾಗುತ್ತದೆ. ಅಂತರಂಗ ಶುದ್ಧಿ-ಬಹಿರಂಗ ಶುದ್ಧಿ ಎಂದ ಕೂಡಲೇ ನಮಗೆ ಹೊಳೆಯುವುದು ಬಸವೇಶ್ವರರ ಸುಪ್ರಸಿದ್ಧವಾದ ಈ ವಚನ.

**"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,**
**ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,**
**ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ."**

ಮರ್ತ್ಯಲೋಕದಲ್ಲಿ ಜನಿಸಿದ ಮೇಲೆ ಕಷ್ಟ ಕಾರ್ಪಣ್ಯಗಳು, ಮನೋದೌರ್ಬಲ್ಯಗಳು, ಪಾಪ ಪುಣ್ಯಗಳ ಕೋಟಲೆಯೊಳಗೆ ಸಿಲುಕಿ ಒದ್ದಾಡಿದ ಮನುಷ್ಯ ಹಂಬಲಿಸುವುದು ಪರಮಾತ್ಮನ ದಿವ್ಯ ಸನ್ನಿಧಿಯನ್ನು. ಅವರ ಕರುಣೆಗೆ ಒಳಗಾಗುವುದನ್ನು, ಆತನನ್ನು ಒಲಿಸಿಕೊಳ್ಳುವುದನ್ನು. ಈ ಹಂಬಲ ಸಫಲವಾಗುವುದು ನಮ್ಮ ಅಂತರಂಗ, ಬಹಿರಂಗಗಳನ್ನು ಶುದ್ಧವಾಗಿರಿಸಿಕೊಂಡಾಗ ಮಾತ್ರ. ಹಾಗಾದರೆ ಈ ರಂಗಗಳನ್ನು ಶುದ್ಧವಾಗಿರಿಸಿಕೊಳ್ಳುವುದು ಹೇಗೆ ? ಬಸವಣ್ಣನವರು ಸರಳವಾದ ಮೇಲೆ ತಿಳಿಸಿದ ಸಪ್ತಸೂತ್ರಗಳನ್ನು ನಮಗಿತ್ತಿದ್ದಾರೆ. ನೋಡಲು ಇವು ಸರಳವಾಗಿ ಕಂಡರೂ ಅಷ್ಟೇ ಆಚರಿಸಲು ಸುಲಭವಲ್ಲದ ಅರ್ಥಸಂಪನ್ನವಾದ ತತ್ತ್ವಗಂಭೀರವಾಗಿವೆ. ಇವುಗಳ ಆಂತರಿಕ ಸತ್ವಗಳ ಬಗ್ಗೆ ಪರಿಶೀಲಿಸಿ ನೋಡೋಣ.

**"ಕಳಬೇಡ"** ಕಳ್ಳತನ ಮಾಡಬೇಡ. ತನಗೆ ಬೇಕಾದ ಎಲ್ಲ ವಸ್ತುಗಳು, ಸೌಲಭ್ಯಗಳೂ ಇವೆ. ತನಗೆ, ಮಡದಿ ಮಕ್ಕಳಿಗೆ, ಬಂಧುಬಾಂಧವರಿಗೂ ಸಾಲುವಷ್ಟಿವೆ. ಆದ್ದರಿಂದ ಕಳ್ಳತನ ಮಾಡುವ ಆವಶ್ಯಕತೆಯೇ ಕಾಣದು. ಅಂದಮೇಲೆ ಕಳಬೇಡ ಎಂದರೆ ಯಾವ ಅರ್ಥದಲ್ಲಿ ? ಆದರೆ ಶರಣರ ದೃಷ್ಟಿಯಲ್ಲಿ ನೋಡಿದರೆ ತಾನೇ ಸ್ವತಃ ದುಡಿದು ಗಳಿಸದೇ ಇತರರಿಂದ ಅನಾಯಾಸವಾಗಿ, ಹಿಂಸಿಸಿ, ಕಾಡಿಬೇಡಿ ಪಡೆದುಕೊಂಡದ್ದೂ ಕಳ್ಳತನವೇ. ತನ್ನ ಪೂರ್ವಜರು ಕಷ್ಟಪಟ್ಟು ಗಳಿಸಿದ ಆಸ್ತಿಯನ್ನು ತನ್ನದೆಂದು ಭಾವಿಸಿ ಅದನ್ನು ಇಷ್ಟಬಂದಂತೆ ಅನುಭವಿಸುವುದೂ ಕಳ್ಳತನವಾಗುತ್ತದೆ. ಹಾಗೆ ನೋಡಿದರೆ [illegible] ಇಲ್ಲದವರು ಇಬ್ಬರೂ ಕಳ್ಳತನ ಮಾಡುತ್ತಾರೆ. ಮೊದಲಿನವನು ಮಾಡಿದ್ದು ತಪ್ಪು, ಎರಡನೆಯವನು ಮಾಡಿದ್ದು ತಪ್ಪಲ್ಲ ಎನ್ನಲಾಗದು. ಮನದ ಮುಂದಣ ಆಸೆಯಿಂದ ಹೊನ್ನು, ಹೆಣ್ಣು, ಮಣ್ಣುಗಳನ್ನು ಕದಿಯುವವರು ದುರಾಸೆಯವರು. ಹಾಗಾಗಿ ಕಳವು ಮಾಡಬೇಕಾದರೆ ದುರಾಸೆ, ದುರಾಲೋಚನೆ, ಅನ್ಯರ ಕಣ್ಣುತಪ್ಪಿಸುವುದು, ಅವೇಳೆಯಲ್ಲಿ ಅಪಹರಣ ಮಾಡುವುದು ಅನಿವಾರ್ಯ ಕಾರಣಗಳು. ಇವೆಲ್ಲ ಕಲುಷಿತ ಮನಸ್ಸಿನವರಿಂದ ಮಾತ್ರ ಸಾಧ್ಯ.

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದರೆ ವ್ಯಕ್ತಿಯು ಕಳವು ಮಾಡದಿರಬೇಕಾದರೆ ಸತ್ಯಶುದ್ಧ ಕಾಯಕದಲ್ಲಿ ನಿರತನಾಗಬೇಕು. ಕಾಯಕ ಮಾಡುವಾಗ ನಿಶ್ಚಲ ಮನಸ್ಸು, ಗಾಢಶ್ರದ್ಧೆ, ಸಮಯ ಪರಿಪಾಲನೆ ಪಾಲಿಸಬೇಕು. ಒಟ್ಟಿನಲ್ಲಿ "ಕಳಬೇಡ" ಎಂಬ ಸೂತ್ರವನ್ನು ಪಾಲಿಸಬೇಕಾದರೆ ಮನಸ್ಸು ನಿರ್ಮಲವಾಗಿರಬೇಕು, ದುರಾಸೆಯಿಲ್ಲದೆ ತಾನು ಗಳಿಸಿದ್ದನ್ನು ಮಾತ್ರವೇ ಉಪಯೋಗ ಮಾಡಬೇಕು. ಇದು ಅಂತರಂಗ ಶುದ್ಧಿಯನ್ನು ಸಾಧಿಸುವ ಪ್ರಕ್ರಿಯೆಯಾಗುತ್ತದೆ.

* # ೧೧೨೫, ೯ನೇ ಮುಖ್ಯರಸ್ತೆ, ಗೋಕುಲಂ ೩ನೇ ಹಂತ, ಮೈಸೂರು-೫೭೦೦೦೨

**"ಕೊಲಬೇಡ"** ಎಂಬುದನ್ನು ಪಾಲಿಸುವವರು ತಮ್ಮ ಜೀವನ ಶೈಲಿಯಲ್ಲಿ ದಯೆಯನ್ನು ಕರುಣೆಯನ್ನು ಹೊಂದಿರುವವರು ಮಾತ್ರ. ಕೊಲ್ಲುವುದು ಎಂದರೆ ಜೀವಿಯನ್ನು ಹತ್ಯೆ ಮಾಡುವುದು ಮಾತ್ರವೇ ಅಲ್ಲ. ಒಬ್ಬರ ಮನಸ್ಸಿನ ಮೇಲೆ ಆಘಾತ ಉಂಟು ಮಾಡುವುದೂ ಅದಕ್ಕೆ ಸಮನಾದ ಹಿಂಸೆಯೇ. ಕೊಲ್ಲುವವನ ಮನಸ್ಸು ಕಠೋರವಾಗಿರುತ್ತದೆ. ಕ್ರೌರ್ಯ ಅವನ ನರನಾಡಿಗಳಲ್ಲಿ ಹರಿದಾಡುತ್ತದೆ. ದ್ವೇಷಾಸೂಯೆಗಳು ತುಂಬಿ ತುಳುಕಾಡುತ್ತಿರುತ್ತವೆ. ಅವನಿಗೆ ದಯೆ, ಕರುಣೆ, ಮಮತೆ, ಪ್ರೀತಿ, ಸಹನೆ ಇತ್ಯಾದಿಗಳು ಅಪರಿಚಿತವಾದವು. ಅವನು ಒಂದು ರೀತಿಯಲ್ಲಿ ಮಾನವನಾಗಿರುವುದಿಲ್ಲ, ದಾನವನಾಗುತ್ತಾನೆ. ಹಾಗಿದ್ದರೆ ಅಂತಹವನಿಗೆ ಆತ್ಮಸಾಕ್ಷಿ, ಅಂತರಂಗದ ಶುದ್ಧಿ ಹೇಗಿರಲು ಸಾಧ್ಯ ?

ಬಸವಣ್ಣನವರು **"ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಚೆಗೆ, ಒಲ್ಲೆನಯ್ಯಾ ಪರಸತಿಯ ಸಂಗವ, ಬಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ, ಬಲ್ಲದ ಬಾಯಂತೆ ಒಂದೇ ಮನ ಮಾಡಿ ನಿಲಿಸಯ್ಯಾ"** ಎಂದಿದ್ದಾರೆ.

ನಾಲಿಗೆಯ ಇಚ್ಛೆಗೆ ತಕ್ಕಹಾಗೆ ರುಚಿಯಾದ ಆಹಾರವನ್ನು ಸೇವಿಸುತ್ತಾ ಹೋದರೆ, ಬೇರೆ ಯಾರೇ ಕೊಲ್ಲಲಿ, ಆ ಮಾಂಸವನ್ನು ತಿನ್ನುವ ಚಟವೂ ಕೊಂದದ್ದಕ್ಕೆ ಸಮನಾದುದು. ಒಮ್ಮೆ ರಕ್ತದ ರುಚಿಕಂಡ ಕ್ರೂರಮೃಗ ಮತ್ತೆ ಮತ್ತೆ ಅದನ್ನೇ ಬಯಸಿ ಬೇಟೆಯಾಡಿ ಕೊಲ್ಲುವಂತೆ ಮನುಷ್ಯನೂ ಆಗಿಬಿಡುತ್ತಾನೆ. ಹರಕೆಯ ಕುರಿಯನ್ನು ಬಲಿಗೊಟ್ಟು ಮಾಂಸದೂಟ ಸವಿಯುವುದೂ ಕೊಲೆಯೇ ಆಗಿದೆ. ಆದ್ದರಿಂದ 'ಕೊಲಬೇಡ' ಎಂದು ಜನರಿಗೆ ಬೋಧಿಸಿದ್ದಾರೆ ಬಸವಣ್ಣನವರು.

**"ಹುಸಿಯ ನುಡಿಯಲು ಬೇಡ"**. ಸುಳ್ಳು ಹೇಳುವ ಅಭ್ಯಾಸವಿದ್ದವರಿಗೆ ಮಾತನಾಡುವಾಗ ಅವರ ಅರಿವಿಲ್ಲದೆಯೇ ಅದು ಪ್ರತ್ಯಕ್ಷವಾಗಿಬಿಡುತ್ತದೆ. "ಹುಸಿ" ಎಂಬುದಕ್ಕೆ ಆಧಾರವಿಲ್ಲದ್ದು, ಕಲ್ಪಿತ ಇತ್ಯಾದಿ ಅರ್ಥಗಳಿವೆ. ಜನರು ತಮ್ಮ ಮಾತಿನಲ್ಲಿ ಅನಾವಶ್ಯಕವಾಗಿ 'ಹುಸಿ'ಯನ್ನು ಬಳಸುತ್ತಾರೆ. ಪ್ರಜ್ಞಾಪೂರ್ವಕವಾಗಿ, ಅನ್ಯಾಯದಿಂದ ಯಾವುದೋ ಲಾಭ ಪಡೆಯಲಿಕ್ಕಾಗಿ, ಹಾಸ್ಯ, ಕೀಟಲೆಗಾಗಿ, ಅನ್ಯರ ಮನಸ್ಸನ್ನು ನೋಯಿಸಲಿಕ್ಕಾಗಿ, ತೊಂದರೆ ಕೊಡಲಿಕ್ಕಾಗಿ, ಸಮಸ್ಯೆಯನ್ನು ಸೃಷ್ಟಿಸಲಿಕ್ಕಾಗಿ, ಒತ್ತಾಯಕ್ಕೆ ಮಣಿದು, ಹೀಗೆ ಹಲವಾರು ಕಾರಣಗಳಿಗಾಗಿ ಜನ ಸುಳ್ಳು ಹೇಳುತ್ತಾರೆ. "ಸಾವಿರ ಸುಳ್ಳು ಹೇಳಿ ಒಂದು ಶುಭಕಾರ್ಯ ಮಾಡು" ಎಂಬ ಆಡು ಮಾತೊಂದು ಇಂತಹ ಹುಸಿಯಾಡುವವರ ಬೆಂಬಲಕ್ಕಿದೆ.

ಬಸವಣ್ಣನವರು ಮನುಷ್ಯನು "ಪರಿಶುದ್ಧ ನಡೆಯುಳ್ಳವನಾಗಿರಬೇಕು, ಅಂತಹ ನಡೆಯುಳ್ಳವನ ನುಡಿಯೂ ಪರಿಶುದ್ಧವಾಗಿರಬೇಕು" ಎಂದು ಆಶಿಸಿದ್ದಾರೆ. ನಡೆನುಡಿಯಲ್ಲಿ ಭೇದವಿಲ್ಲದವರೇ ನಿಜ ಶರಣರು ಎಂಬ ಅರ್ಥ ವಚನಕಾರರಿಗೆ ಮಾತ್ರ ಸಲ್ಲುತ್ತದೆ. ಅವರ ನುಡಿ ಹುಸಿಯಾಗದ ಮಂತ್ರ, ಶಕ್ತಿಸಂಪನ್ನವಾದುದು. ಒಂದು ಹುಸಿಯಾಡಲು ಹೋಗಿ ಸರಪಳಿ ಸುಳ್ಳುಗಳನ್ನು ಪೋಣಿಸುವುದು ಅನಿವಾರ್ಯವಾಗುತ್ತದೆ.

ಶರಣರ ನುಡಿಗಳು ಶತಮಾನಗಳ ಕಳೆದರೂ ಅವುಗಳ ಮಹತ್ವ ಕುಗ್ಗದಿರಲು ಕಾರಣ ಅವು "ವಚನ"ಗಳು. ಅವು ಸ್ಫಟಿಕದಷ್ಟೇ ಸ್ಪಷ್ಟ. "ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು, ನುಡಿದರೆ ಲಿಂಗಮೆಚ್ಚಿ ಅಹುದಹುದೆನ್ನಬೇಕು" ನುಡಿಯಂತೆ ನಡೆಯಿರಬೇಕೆಂಬುದು ಶರಣರೆಲ್ಲರ ನಿಲುವು. ಆದ್ದರಿಂದಲೇ "ಹುಸಿಯ ನುಡಿಯಲು ಬೇಡ" ಎಂಬ ಮಾತು. ಇದೇ ಅಂತರಂಗ ಬಹಿರಂಗದ ಶುದ್ಧಿಗೆ ಹಿಡಿದ ಕನ್ನಡಿ.

**"ಮುನಿಯಬೇಡ"** ಇದೊಂದು ಮನುಷ್ಯರ ವರ್ತನೆ. ಅನ್ಯರು ತನಗೆ ಕೇಡು ಬಗೆದರೆಂದು, ಅನ್ಯರು ತನ್ನ ಬಗ್ಗೆ ಆರೋಪ ಮಾಡಿದರೆಂದು, ತನ್ನನ್ನು ಜಗಳಕ್ಕೆ ನೂಕಿದರೆಂದು, ತನಗೆ ಸುಳ್ಳು ಹೇಳಿದರೆಂದು, ಅನೇಕ ಊಹಾಪೋಹದ ಅಥವ ವಾಸ್ತವದ ಕಾರಣಗಳಿಗಾಗಿ ಸಿಟ್ಟು ಸೆಡವು ಉಂಟಾಗುತ್ತದೆ. ಈ ಮುನಿಸು ಯಾವುದೇ ಕಾರಣಗಳಿಂದಾಗಿ ಉಂಟಾದರೂ ಮನಸ್ಸಿನಲ್ಲಿ ಕೋಪದ ಅಲೆಗಳನ್ನು ಎಬ್ಬಿಸಿ ಬಹಿರಂಗದಲಿ ಮುನಿಸಿನ ವರ್ತನೆಯಾಕಾರದಲ್ಲಿ ಪ್ರಕಟವಾಗುತ್ತದೆ. ಇದರಿಂದಾಗ ಕೋಪವು 'ಅರಿವಿನ ಕೇಡಿಗೆ, ಹಿರಿಯತನದ ಕೇಡಿಗೆ' ವ್ಯಕ್ತಿಯನ್ನು ದೂಡುತ್ತದೆ.

ಅದಕ್ಕೆ ಬಸವಣ್ಣನವರು **"ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ ? ತನಗಾದ ಆಗೇನು ? ಅನ್ಯರಿಗಾದ ಚೇಗೇನು ? ತನುವಿನ ಕೋಪ ತನ್ನ ಹಿರಿಯತನದ ಕೇಡು, ಮನದ ಕೋಪ ತನ್ನ ಅರಿವಿನ ಕೇಡು, ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು"** ಎಂದಿದ್ದಾರೆ.

ಅಂತರಂಗವು ಮಲಿನವಾಗದಂತೆ ಸದಾ ಕಾಪಾಡಿ ಕೊಂಡು ಹೋಗಲು ಮುನಿಯದೇ ಇರಬೇಕಾಗುತ್ತದೆ. ಅಕ್ಕಮಹಾದೇವಿಯ ನುಡಿಗಳಂತೆ ಏನೇ ಬಂದರೂ **"ಕೋಪವ ತಾಳದೆ ಸಮಾಧಾನಿಯಾಗಿರಬೇಕು."**

**"ಅನ್ಯರಿಗೆ ಅಸಹ್ಯ ಪಡಬೇಡ."** ಏಕೆಂದರೆ ಮಾನವ ಸಮಾಜವು ಪರಸ್ಪರ ಸ್ನೇಹ ವಿಶ್ವಾಸಗಳಿಂದ ಹೆಣೆದ ಬಲೆ. ಅನ್ಯರನ್ನು ಕಂಡು ಮುಖ ಸಿಂಡರಿಸಿಕೊಂಡರೆ, ಅವರನ್ನು ಕಂಡು ಅಸಹ್ಯಪಟ್ಟರೆ ಪರಸ್ಪರ ಸಂಬಂಧಗಳು ಬೆಸೆಯುವುದು ಹೇಗೆ ? ಸಂಬಂಧಗಳಿಲ್ಲದೆ ಸಮಾಜವಿಲ್ಲ. ಸಮಾಜವಿಲ್ಲದೆ





ಸಂಸ್ಕೃತಿಯಿಲ್ಲ. ಸಂಸ್ಕೃತಿಯಿಲ್ಲದೆ ಮನುಷ್ಯ ಮಾನವನಾಗಿ ಬೆಳೆಯಲು, ಬಾಳಲು ಹೇಗೆ ಸಾಧ್ಯ ? ಆದ್ದರಿಂದ ಸಮಾಜದ ಬೇರಿಗೇ ಕೊಡಲಿ ಇಡುವ "ಅಸಹ್ಯ ಪಡುವ" ವರ್ತನೆ ಸಹಜವಾದುದಲ್ಲ. ಶರಣರ ನಂಬಿಕೆಯಂತೆ ಪ್ರತಿಯೊಬ್ಬರೂ ಆ ದೇವನ ಕೊಡುಗೆಯಾದ್ದರಿಂದ ಅಸಹ್ಯ ಪಟ್ಟರೆ ಒಂದು ರೀತಿಯಲ್ಲಿ ದೈವದ್ರೋಹವಾಗುವುದಿಲ್ಲವೆ ? ಬಸವಣ್ಣನವರು **"ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ"** ಎಂದು ಹೇಳಿದಂತೆ ಇತರರನ್ನು ಕಂಡಾಗ ಮೃದುವಚನ, ಸದ್ವಿನಯ ಅತ್ಯಂತ ಅಗತ್ಯವಾಗುತ್ತದೆ. ಅಸಹನೆಯಿಂದ ಅಸಹ್ಯ ಪಡುವುದು ನಿಷೇಧಾತ್ಮಕವಾದರೆ, ಪ್ರೇಮದಿಂದ ಉಪಚರಿಸುವುದು ಇತ್ಯಾತ್ಮಕವಾಗುತ್ತದೆ. ಈ ವರ್ತನೆಯು ಅಂತರಂಗದ ನೈರ್ಮಲ್ಯದೆಡೆಗೆ ಕೊಂಡೊಯ್ಯುತ್ತದೆ.

ಕೊನೆಯ ಎರಡು ಸೂತ್ರಗಳು **"ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ"** ಆತ್ಮಪ್ರಶಂಸೆ, ಪರನಿಂದೆಗಳು ಒಂದೇ ವರ್ತನೆಯ ಎರಡು ಮುಖಗಳು. ಯಾರು ಆತ್ಮಪ್ರಶಂಸೆ ಮಾಡಿಕೊಳ್ಳುತ್ತಾರೋ ಅವರು ಪರರನ್ನು ನಿಂದಿಸಿ ಸಂತೋಷಿಸುತ್ತಾರೆ. ಇಂತವರ ವರ್ತನೆಯು ಖಂಡನಾರ್ಹ ವಾದುದು. ಬಸವಣ್ಣನವರು ಅದಕ್ಕಾಗಿಯೇ **"ಆತ್ಮಸ್ತುತಿ, ಪರನಿಂದೆಯ ಕೇಳಿಸದಿರಯ್ಯಾ ನಿಮ್ಮ ಧರ್ಮ"** ಎಂದು ತಮ್ಮ ದೈವದಲ್ಲಿ ಮೊರೆಯಿಟ್ಟಿದ್ದಾರೆ. ಆತ್ಮಪ್ರಶಂಸೆಯಿಂದ ಅಹಂಕಾರ ಹುಟ್ಟುತ್ತದೆ. ಅಹಂಕಾರ ನಿರಸನಕ್ಕೆ ಶರಣರು ಹೆಚ್ಚು ಮಹತ್ವ ಕೊಟ್ಟಿದ್ದಾರೆ.

**"ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪುದೋ ? ಅಹಂಕಾರಕ್ಕೆ ಎಡೆಗೊಡದೆ ಲಿಂಗ ತನುವಾಗಿರಬೇಕು. ಅಹಂಕಾರ ರಹಿತವಾದಲ್ಲಿ ಸನ್ನಿಹಿತ ಕಾಣಾ ಕೂಡಲಸಂಗಮದೇವಾ."**

ಹೊಗಳಿಕೆಯಿಂದ ಅಹಂಕಾರ ಉಬ್ಬುವುದು. ಆತ್ಮ ಪ್ರಶಂಸೆಗೆ ಇಂಬುಗೊಡುವುದು. ಅದರಿಂದ ಇತರರನ್ನು ತೆಗಳಲು ಪ್ರಚೋದನೆಯಾಗುವುದೂ ಉಂಟು. ಆ ಕಾರಣದಿಂದ ಬಸವಣ್ಣನವರು –

**"ಹೊಯಿದವರೆನ್ನ ಹೊರೆದವರೆಂಬೆ, ಬಯಿದವರೆನ್ನ ಬಂಧುಗಳೆಂಬೆ, ನಿಂದಿಸಿದವರೆನ್ನ ತಂದೆ ತಾಯಿಗಳೆಂಬೆ, ಜರಿದವರೆನ್ನ ಜನ್ಮ ಬಂಧುಗಳೆಂಬೆ, ಹೊಗಳಿದವರೆನ್ನ ಹೊನ್ನಶೂಲದಲಿಕ್ಕಿದವರೆಂಬೆ"** ಎನ್ನುತ್ತಾರೆ. ಕೆಡುಕು ಮಾಡಿದವರು ಕೆಡುಕನ್ನು ಬಯಸಿ ನಿಂದಿಸಿದವರಿಗಿಂತ, ಹೊಗಳಿ ತಮ್ಮ ಆತ್ಮ ಪ್ರಶಂಸೆಯನ್ನು ಹಿಗ್ಗಿಸುವವರಿಂದಲೇ ಹೆಚ್ಚು ತೊಂದರೆ ಎಂದಿದ್ದಾರೆ. ಆತ್ಮಪ್ರಶಂಸೆ, ಪರನಿಂದೆ ಎರಡೂ ವರ್ತನೆಗಳು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಅಶುದ್ಧವಾಗಿವೆಯೆಂಬುದಕ್ಕೆ ದ್ಯೋತಕವಾಗಿವೆ. ಅಂದರೆ ಅಂತರಂಗ ಬಹಿರಂಗಗಳೆರಡೂ ಕಲುಷಿತವಾಗಿವೆ ಎಂದರ್ಥ.

ಇದುವರೆಗೆ ತಿಳಿಸಿದ ಏಳೂ ಸೂತ್ರಗಳು ಪ್ರತ್ಯೇಕ ಪ್ರತ್ಯೇಕವಲ್ಲ. ಇವುಗಳು ಪರಸ್ಪರವಾಗಿ ಪೂರಕವಾಗುತ್ತವೆ. ಒಂದರೊಳಗೊಂದು ನುಸುಳಿ ಸಂಕೀರ್ಣವಾದ ಮಹಾಸೂತ್ರವಾಗುತ್ತವೆ. ಕಳ್ಳತನದಿಂದ ಪ್ರಾರಂಭಿಸಿ ಅನ್ಯರನ್ನು ಹಳಿಯುವವರೆಗೆ ಅನುಚಿತ ವರ್ತನೆಗಳು ಅಂತರಂಗ ಬಹಿರಂಗಗಳಿಗೆ ಮಾಲಿನ್ಯವನ್ನು ಲೇಪಿಸುತ್ತವೆ. ಶರಣರು ನೀಡಿದ ಸಪ್ತಸೂತ್ರಗಳನ್ನು ಮೈಗೂಡಿಸಿಕೊಂಡರೆ ಅಂತರಂಗ ಬಹಿರಂಗಗಳನ್ನು ಶುದ್ಧಿಗೊಳಿಸಿಕೊಂಡು ಆ ಕೂಡಲಸಂಗನ ಸನ್ನಿಧಿಯನ್ನು ಹೊಂದಬಹುದು. ಸರ್ವರಿಗೂ ಇದು ಸಾಧ್ಯವಾಗಲೆಂಬುದೇ ನಮ್ಮ ಹಾರೈಕೆ.

## ಕ್ಷೇತ್ರವಾರ್ತೆ



ಪರಮಪೂಜ್ಯ ಶ್ರೀ ಶ್ರೀಗಳವರ ೧೧೦ನೇ ಜನ್ಮದಿನೋತ್ಸವದ ಶುಭ ಸಂದರ್ಭದಲ್ಲಿ ಜೆ.ಡಿ.ಎಸ್. ಮುಖಂಡ ಶ್ರೀ ಗೌರಿಶಂಕರ್ ಅವರು ೧೧೦ ಕ್ವಿಂಟಾಲ್ ಅಕ್ಕಿಯನ್ನು ಶ್ರೀಮಠದ ದಾಸೋಹಕ್ಕೆ ನೀಡಿ, ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಜೆ.ಡಿ.ಎಸ್. ಮುಖಂಡರಾದ ಶ್ರೀ ನರಸೇಗೌಡ, ಶ್ರೀ ಕೆಂಪರಾಜು ಮೊದಲಾದವರು ಉಪಸ್ಥಿತರಿದ್ದರು.

## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೫೪೩. | ಶ್ರೀ ಎಸ್.ಎಂ. ಮಲ್ಲೇಶಪ್ಪ<br>ಹಾಸನ | ೨,೦೦೦.೦೦ |
| ೧೫೪೪. | ಶ್ರೀ ತಿಮ್ಮಗಂಗಯ್ಯ<br>ಬೆಂಗಳೂರು | ೧,೦೦೦.೦೦ |
| ೧೫೪೫. | ಶ್ರೀ ಡಿ.ಎಸ್. ಶಿವಶಂಕರಯ್ಯ,<br>ತುಮಕೂರು | ೧೦,೦೦೦.೦೦ |
| ೧೫೪೬. | ಶ್ರೀ ಹೊನ್ನಗಂಗಯ್ಯ<br>ರೇವಣ್ಣನಪಾಳ್ಯ | ೧,೦೦೦.೦೦ |
| ೧೫೪೭. | ಶ್ರೀ ಎಂ.ಹೆಚ್. ಬೋರೇಗೌಡ<br>ತಿಪಟೂರು | ೧,೦೦೦.೦೦ |
| ೧೫೪೮. | ಶ್ರೀ ಎಂ.ಪಿ. ಕುಮಾರಸ್ವಾಮಿ<br>ಹೊಳೇನರಸೀಪುರ | ೧,೦೦೦.೦೦ |
| ೧೫೪೯. | ಶ್ರೀ ಗುರುಮಲ್ಲಪ್ಪ<br>ತುಮಕೂರು | ೧,೦೦೦.೦೦ |
| ೧೫೫೦. | ಶ್ರೀ ಎಸ್. ಚಂದ್ರಯ್ಯ<br>ಸಿರಿಗನಹಳ್ಳಿ | ೧,೦೦೦.೦೦ |
| ೧೫೫೧. | ಶ್ರೀ ಎಂ. ಮಲ್ಲಿಕಾರ್ಜುನಯ್ಯ<br>ಬೆಂಗಳೂರು | ೧,೦೦೧.೦೦ |
| ೧೫೫೨. | ಶ್ರೀ ದಕ್ಷಿಣಾಮೂರ್ತಿ<br>ಬೆಂಗಳೂರು | ೨,೦೦೦.೦೦ |
| ೧೫೫೩. | ಶ್ರೀ ಬಸವಣ್ಣ<br>ಕುಂತೂರು | ೨,೦೦೫.೦೦ |
| ೧೫೫೪. | ಶ್ರೀಮತಿ ಕೆ. ಸಿದ್ಧಗಂಗಮ್ಮ ಆರ್ ಶಿವಣ್ಣ(ಮೈಕೋ)<br>ಬೆಂಗಳೂರು | ೧,೦೦೮.೦೦ |
| ೧೫೫೫. | ಶ್ರೀ ಟಿ.ಎಸ್. ಗಂಗಾಧರ್<br>ಸೋಮನಾಥಪುರ | ೧,೦೦೦.೦೦ |
| ೧೫೫೬. | ಶ್ರೀ ಎಸ್. ರೇಣುಕಯ್ಯ<br>ಮರೂರು | ೧,೧೧೦.೦೦ |
| ೧೫೫೭. | ಶ್ರೀ ಲೋಕೇಶಮೂರ್ತಿ ಸಿ.ಡಿ.<br>ಬೆಂಗಳೂರು | ೧,೦೦೧.೦೦ |
| ೧೫೫೮. | ಶ್ರೀ ಬಿ.ಎಸ್. ಪಾಲಾಕ್ಷಪ್ಪ<br>ಗೌರಾಪುರ | ೧,೦೦೧.೦೦ |
| ೧೫೫೯. | ಶ್ರೀ ಎ. ಪರಮಶಿವಯ್ಯ<br>ಹಾಸನ | ೮೦೦.೦೦ |
| ೧೫೬೦. | ಶ್ರೀ ಎಸ್.ಹೆಚ್. ಜಡಿಯಪ್ಪ<br>ಮೈದಾಳ | ೧,೦೦೦.೦೦ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೫೬೧. | ಶ್ರೀ ಕೆ. ವೀರೇಶ ಎಲ್.ಐ.ಸಿ.<br>ಬಳ್ಳಾರಿ | ೨,೦೦೦.೦೦ |
| ೧೫೬೨. | ಶ್ರೀ ಸಿದ್ಧಪ್ಪ<br>ಮದಲಕೋಟೆ | ೧,೦೦೦.೦೦ |
| ೧೫೬೩. | ಶ್ರೀ ಚನ್ನಬಸವಯ್ಯ<br>ಮಲ್ಲರಬಾನವಾಡಿ | ೧,೦೦೦.೦೦ |
| ೧೫೬೪. | ಶ್ರೀ ಬಿ. ವೀರಪ್ಪಯ್ಯ<br>ಚಿಕ್ಕಮಗಳೂರು | ೧,೦೦೦.೦೦ |
| ೧೫೬೫. | ಶ್ರೀ ಎಸ್. ಶಂಕರಪ್ಪ<br>ತುಮಕೂರು | ೧,೦೦೦.೦೦ |
| ೧೫೬೬. | ಶ್ರೀ ಸದಾಶಿವಯ್ಯ<br>ಹರಿವಾಣಿಪುರ | ೨,೦೦೦.೦೦ |
| ೧೫೬೭. | ಶ್ರೀ ಕೆ.ಎಸ್. ಶಿವನಂಜಯ್ಯ<br>ಶ್ರೀ ಸಿದ್ಧಗಂಗಾಮಠ | ೨,೦೦೦.೦೦ |
| ೧೫೬೮. | ಶ್ರೀ ಗಂಗಾಧರಯ್ಯ<br>ಬೆಂಗಳೂರು | ೨,೦೦೦.೦೦ |
| ೧೫೬೯. | ಶ್ರೀ ಎಂ.ಎನ್. ನಾಗರಾಜಯ್ಯ<br>ತುಮಕೂರು | ೧,೦೦೧.೦೦ |
| ೧೫೭೦. | ಶ್ರೀ ಹೆಚ್.ಡಿ. ಭೀಮಣ್ಣ<br>ಹರಿಯಪ್ಪನಹಳ್ಳಿ | ೧,೦೦೫.೦೦ |
| ೧೫೭೧ | ಶ್ರೀ ಬಿ. ರಾಜಪ್ಪ<br>ಬಸವಾಪಟ್ಟಣ | ೧,೦೦೧.೦೦ |
| ೧೫೭೨. | ಶ್ರೀ ಎಸ್. ಚಂದ್ರಶೇಖರಯ್ಯ<br>ಕೊಟ್ಟನಹಳ್ಳಿ, ಹೊಸಬಡಾವಣೆ | ೧,೦೦೦.೦೦ |
| ೧೫೭೩. | ಶ್ರೀ ಎನ್.ಹೆಚ್. ಪುಟ್ಟಲಿಂಗಯ್ಯ<br>ಬೆಂಗಳೂರು | ೨,೦೦೨.೦೦ |
| ೧೫೭೪ | ಶ್ರೀ ಬಿ.ಟಿ. ಹನುಮಂತರಾಯಪ್ಪ<br>ಬೊಮ್ಮಶೆಟ್ಟಿಹಳ್ಳಿ | ೫೦೨.೦೦ |
| ೧೫೭೫. | ಶ್ರೀ ವಿ. ಭದ್ರಯ್ಯ<br>ಬೆಂಗಳೂರು | ೨,೦೦೨.೦೦ |
| ೧೫೭೬. | ಶ್ರೀ ಮಹದೇವಯ್ಯ<br>ಬೆಂಗಳೂರು | ೨,೦೦೧.೦೦ |
| ೧೫೭೭ | ಶ್ರೀ ಗುರುಶಾಂತಯ್ಯನವರ ಧರ್ಮಪತ್ನಿ<br>ದಿವಂಗತ ಎಸ್. ಶರಣಮ್ಮ ಸ್ಮರಣಾರ್ಥ,<br>ವಿಜಯನಗರ. ಬೆಂಗಳೂರು | ೧೦,೫೫೫.೦೦ |

(ಮುಂದುವರೆಯುತ್ತದೆ)



## ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಸಮಾರಂಭದ ದೃಶ್ಯಾವಳಿಗಳು















## ಶ್ರೀಮಠಕ್ಕೆ ಮುಖ್ಯಮಂತ್ರಿ ಭೇಟಿ





ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರು, ಏಪ್ರಿಲ್ ೨ ರಂದು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಹುಟ್ಟುಹಬ್ಬದ ಶುಭಾಶಯ ಕೋರಿ, ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಸಚಿವರಾದ ಶ್ರೀ ಜಿ. ಪರಮೇಶ್ವರ್, ಶ್ರೀ ಟಿ.ಬಿ. ಜಯಚಂದ್ರ, ಸಂಸದ ಶ್ರೀ ಮುದ್ದಹನುಮೇಗೌಡ, ಪ್ರಜಾಪ್ರಗತಿ ಪತ್ರಿಕೆ ಸಂಪಾದಕರಾದ ಶ್ರೀ ಎಸ್. ನಾಗಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು

RNI No. 17139/69

"Siddaganga" Monthly - Postal Reg. No. L2/RNP/385/TMR/2015-17



ಏಪ್ರಿಲ್ ೧೧ ರ ಸಂಜೆ ತುಮಕೂರು ಸರ್ಕಾರಿ ಪದವಿಪೂರ್ವ ಕಾಲೇಜಿನ ಮೈದಾನದಲ್ಲಿ ತುಮಕೂರು ನಾಗರಿಕ ಸಮಿತಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಕಾರ್ಯಕ್ರಮವನ್ನು ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ವಿಜಯಪುರದ ಯೋಗಾಶ್ರಮದ ಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು, ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯ, ಶ್ರೀ ಎಸ್. ನಾಗಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಹಾಗೂ ಗೌರವಾನ್ವಿತ ರಾಜ್ಯಪಾಲರಾದ ಶ್ರೀ ವಾಜುಭಾಯಿ ವಾಲಾ ಅವರು ಸಂತಸದ ಕ್ಷಣಗಳನ್ನು ಹಂಚಿಕೊಳ್ಳುತ್ತಿರುವುದು

ಪ್ರೊ. ಹೆಚ್.ವಿ. ವೀರಭದ್ರಯ್ಯ ಹಾಗೂ ಎಚ್.ಎಸ್. ಸಿದ್ದಗಂಗಪ್ಪ ಅವರ ಸಂಪಾದಕತ್ವದಲ್ಲಿ ಹೊರತಂದ 'ಸಂದೇಶ ಸಿರಿ' ಗ್ರಂಥವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಸ್ವಾಮಿಗಳವರು ಲೋಕಾರ್ಪಣೆ ಮಾಡಿದರು.



ಸನ್ಮಾನ್ಯ ರಾಜ್ಯಪಾಲರಾದ ಶ್ರೀ ವಾಜುಭಾಯಿ ಆರ್. ವಾಲಾ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಪುಷ್ಪ ನಮನ.

ಘನತೆವೆತ್ತ ರಾಜ್ಯಪಾಲರಿಂದ ಉದ್ಘಾಟನಾ ಭಾಷಣ